


ಶ್ರೀ ಜಯಕರ್ನಾಟಕ ಗ್ರಂಥಮಾಲೆಯ ಪ್ರಥಮ ಪುಷ್ಪ

# ಹಕ್ಕಿ ಹಾರುತಿದೆ.

( ಹಾಗು ಕೆಲವು ಕವಿತೆಗಳು. )







ಜಯಕರ್ನಾಟಕ ಗ್ರಂಥಮಾಲೆಗಾಗಿ
ಶ್ರೀ. ಕುಲಕರ್ಣಿ ಶೇಷಗಿರಿರಾಯರಿಂದ
ಪ್ರಕಾಶಿತವಾಯಿತು.

# ಹಕ್ಕಿ ಹಾರುತಿದೆ.




ಸಂಪಾದಕರು,

**ಶ್ರೀ. ಬೇಂದ್ರೆ ದತ್ತರಾಯರು ;**

ಗೆಳೆಯರ ಗುಂಪು.







**ಜಯಕರ್ನಾಟಕ ಮಂಡಲ**

**ಸಾಧನಕೇರಿ : ಧಾರವಾಡ.**

ಮೊದಲನೆಯ ಮುದ್ರಣ ೧೯೩೦



ಈ ಗ್ರಂಥದ ಒಡೆತನವು

**ಮಂಡಲದ ಕಡೆಗೆ;**

ಕವಿತೆಗಳ ಒಡೆತನವು

**ಬರೆದವರ ಕಡೆಗೆ.**

# ಎರಡುನುಡಿ

ಕನ್ನಡ ನಾಡಿನ ಬೇರೆ ಬೇರೆ ಭಾಗಗಳ ಸಾಹಿತ್ಯಪ್ರೇಮಿಗಳಾದ ರಸಿಕರ ಆಗ್ರಹಕ್ಕಾಗಿ ಇದೀಗ ಈ ಕಾವ್ಯಮಾಲೆಯನ್ನು ಪ್ರಕಟಿಸುತ್ತಿರುವುದು. ಈಗಲೀಗ ನಮ್ಮ ನಾಡಿನಲ್ಲಿ ಹಲವರಿಗೆ ಹಲವು ತೆರದಿಂದ ಕವಿತೆಯೆಂದರೆ ತಲೆಬೇಸರ; ಕಾರಣ 'ನನ್ನದು ಈ ಕನ್ನಡನಾಡನ್ನು' ಹೋದ ವರ್ಷ ಪ್ರಕಟಿಸಿದ ಬಳಿಕ, ಮತ್ತೆ ಈ ವರ್ಷವೂ ಇನ್ನೊಂದು ಕವಿತಾ ಪುಸ್ತಕವನ್ನೇ ಪ್ರಕಟಿಸುವ ಮನಸ್ಸಿರಲಿಲ್ಲ. ಈ ಸಲ ಒಂದು ಕಥಾ ಗುಚ್ಛವನ್ನಾಗಲಿ ಹೊಸ ಕಾದಂಬರಿಯನ್ನಾಗಲಿ ಇಲ್ಲವೆ ಐತಿಹಾಸಿಕ, ಶಾಸ್ತ್ರೀಯ ವಿಚಾರದ ಗ್ರಂಥವೊಂದನ್ನಾಗಲಿ ಪ್ರಕಟಿಸಬೇಕೆಂದಿದ್ದೆವು. ಆದರೆ ಮೇಲೆಯೇ ಹೇಳಿದಂತೆ ಗೆಳೆಯರ ( ಗುಂಪಿನ ) ಕವಿತೆಗಳಲ್ಲಿ ಕೆಲವನ್ನಾದರೂ ಆಯ್ದು ಒತ್ತಟ್ಟಿಗೆ ಸೇರಿಸಿ ಪ್ರಕಟಿಸಬೇಕಾಗಿ ಅನೇಕ ಅತ್ಯಾಗ್ರಹದ ಸೂಚನೆಗಳೂ ಪತ್ರಗಳೂ ಬಂದವು. ಈ ಸಂಗ್ರಹದಲ್ಲಿ ಮೊಟ್ಟಮೊದಲಿಗೆ ಇರುವ ಪ್ರಧಾನ ಕವಿತೆಯಾದ "ಹಕ್ಕಿಹಾರುತಿದೆ ನೋಡಿದಿರಾ" ಎಂಬದು ಬೆಳಗಾವಿಯಲ್ಲಿ ಹೋದ ವರ್ಷ ಜರುಗಿದ ಸಾಹಿತ್ಯಪರಿಷತ್ತಿನ ಕಾಲಕ್ಕೆ ಎಲ್ಲರ ಮನಸ್ಸನ್ನೂ ಎಳೆದದ್ದೇ ಈ ಆಗ್ರಹಕ್ಕೆ ಕಾರಣವಾಗಿರಬೇಕು.

ಒಳ್ಳೆಯ ಅಭ್ಯಾಸಿಗಳಿಂದ, ವಿಚಾರಿಗಳಿಂದ ಬರೆಯಲ್ಪಟ್ಟ, ಶಕ್ತರಾದ ಸಂಪಾದಕರಿಂದ ಸಂಪಾದಿತವಾದ ಪುಸ್ತಕಗಳನ್ನೇ ಕಾಲಕಾಲಕ್ಕೆ ನಮ್ಮ ತಾಯ್ನಾಡಿಗೆ ಅರ್ಪಿಸಬೇಕೆಂದು ನಮ್ಮ ಹಂಬಲ. ಈ ಉದ್ದೇಶದಿಂದಲೇ ಈ ಮೊದಲು 'ನನ್ನದು ಈ ಕನ್ನಡನಾಡು' ಪ್ರಕಟಿತವಾಗಿ ಇದೀಗ ಅದರ ಪ್ರತಿಗಳೆಲ್ಲ ತೀರಿ, ಎರಡನೇ ಮುದ್ರಣಕ್ಕೆ ಸಿದ್ಧವಾಗಿದೆ. ಕನ್ನಡನಾಡಿನ ಉದಾರಹೃದಯಿಗಳು ನಮ್ಮೀ ಹಂಬಲಕ್ಕೆ ಬೆಂಬಲವಿತ್ತು ಹುರಿದುಂಬಿಸಿದರೆ, ನಾವು ಇನ್ನೂ ಹೆಚ್ಚಿನ ಸೇವೆಗೆ ಅಣಿಯಾಗಲು ಕೋರುತ್ತೇವೆ.

ಈ ಪ್ರಕಟನಾಕಾರ್ಯವು “ **ಜಯಕರ್ನಾಟಕ ಮಂಡಲ** ” ದಿಂದ ನಡೆಯತಕ್ಕದ್ದಿದೆ. ಈ ಮಂಡಲದ ಇಚ್ಛೆಯು ಕರ್ನಾಟಕ ಸಾಹಿತ್ಯ-ಕಾರ್ಯದಲ್ಲಿ, ತನ್ನಿಂದಾಗತಕ್ಕ ‘ ಅಳಲೀ ಭಕ್ತಿಯ ಮಳಲ ಸೇವೆ’ಯನ್ನು ಸಲ್ಲಿಸಬೇಕೆಂದುದೇ. ಅದಕ್ಕಾಗಿ ಜನತಾಜನಾರ್ದನನ ಪ್ರೇಮಪುರಸ್ಸರವಾದ ಆಶೀರ್ವಾದವೂ ಪ್ರೋತ್ಸಾಹವೂ ಅತ್ಯವಶ್ಯ.

**ಕಡಲೆಗಡಬಿನ ಹುಂಣಿವೆ**
**ಚಾಲುಕ್ಯವಿಕ್ರಮವರ್ಷ ೮೫೫** }

**ಪ್ರಕಾಶಕರು**

# ಮುನ್ನುಡಿ

ಕನ್ನಡನುಡಿಯ ಮಾಮರವು ಚಿಗುರುತ್ತಲಿದೆ; ನನೆಕೊನೆವೋಗುತ್ತಲಿದೆ; ಹೂತುಕಾತು ಹಣ್ಣು ಬಿಡುತ್ತಲಿದೆ. ರಸಿಕರು ವಿಮರ್ಶಕರು ಟೀಕಾಕಾರರು ಶುಕಪಿಕಭೃಂಗಗಳಂತೆ ತಂತಮ್ಮ ಕಾರ್ಯವನ್ನು ಕೈಕೊಂಡು ಕೊನೆಗಾಣಿಸುತ್ತಲಿದ್ದಾರೆ. ಮೇಲಾಗಿ ಇದೆಲ್ಲವನ್ನೂ ಚೈತ್ರ-ವೈಶಾಖದ ಗಾಳಿ ಬೆಳಕು ಬಿಸಿಲು ಬೆಳುದಿಂಗಳು ಪ್ರಕೃತಿ ಸಹಜವಾಗಿ ಪರಿಪಾಕಗೊಳಿಸುತ್ತಲಿವೆ. ಆದರೆ ಹಣ್ಣಾಗಗೊಡದೆ ಕಾಯಿಯನ್ನೆ ತಿಂದು ಹುಳಿಗೆ ಹೆಸರಿಡುವವರೂ, ಕಾಯಿಯಾಗಗೊಡದೆ ಮಿಡಿಯನ್ನೆ ಕಡಿದು ಒಗರಿಗೆ ಮೋರೆ ಕಿವುಚುವವರೂ ಕಡಿಮೆ ಇಲ್ಲ. ತಮ್ಮ ಲೀಲೆಯಲ್ಲಿ ಮಾಮರಕ್ಕೆ ಬರಿ ಕಲ್ಲೆಸೆಯುವ ಪುಣ್ಯಾತ್ಮರೂ ಉಂಟು. ಆದರೂ ಚೈತ್ರ-ವೈಶಾಖ ಬಂದಿದೆ;—ಮಾಮರವು ಹೂತುಕಾತು ಹಣ್ಣು ಬಿಡುತ್ತಲಿದೆ. ಹೀಗಿದ್ದು ಹೋಳೀಹುಣ್ಣಿವೆಯಾಗಿ ಹೋದಮೇಲೂ ಮೊದಲಿನ ಕಾಯಕವನ್ನೇ ನಡೆಯಿಸುವವರ ಕೈ ಬಾಯಿ ಹಿಡಿಯುವವರಿಲ್ಲ.

ಕವಿತೆಗೆ ವಾಚಕರು ದುರ್ಲಭ. ಆದರಲ್ಲಿಯೂ 'ನೂತನಕವಿತೆ'ಯು ನಿಂದೆಗೆ ಗುರಿಯಾಗುವದು ಪೂರ್ವದಿಂದ ನಡೆದುಬಂದಿದೆ. ಅಯುಕ್ತ ಕವಿತೆಯು ಸ್ವದೋಷದಿಂದಲೆ ಲಯವಾಗುವದು. ಆದರೆ ಅಯುಕ್ತ ಟೀಕೆಯು ಬುದ್ಧಿಭೇದವನ್ನುಂಟುಮಾಡಿ ಸಮಾಜದ ಸುಖವಿಕಾಸಕ್ಕೆ ಅಡ್ಡಿಯನ್ನುಂಟುಮಾಡುವದು.

ಸಾಹಿತ್ಯಕ್ಕಿಂತ ಜೀವನವು ಮೇಲು; ಯಾಕಂದರೆ ಸಾಹಿತ್ಯವು ಉನ್ನತ ಜೀವನದ ಒಂದು ಅಂಗ. ಅದು ಜೀವನದಿಂದಲೇ ಹುಟ್ಟಿ, ಬೆಳೆದು ಅದರಲ್ಲಿಯೇ ಲೀನವಾಗತಕ್ಕದು. ಆದಕಾರಣ ಜೀವನದ ರೌದ್ರವೆ ಇರಲಿ, ಶಾಂತವೆ ಇರಲಿ, ಕರುಣವೆ ಇರಲಿ, ವೀರವೆ ಇರಲಿ, ಶೃಂಗಾರವೆ ಇರಲಿ, ಅದ್ಭುತವೆ ಇರಲಿ, ಭಯಾನಕವಿರಲಿ, ಭೀಭತ್ಸವಿರಲಿ, ಯಾವ ಸ್ವರೂಪವೆ ಆಗಲಿ ಅದನ್ನು ಹೊಳೆಯುವಂತೆ, ಮೂಡುವಂತೆ, ಕಾಣು

ವಂತೆ, ಸಾಕ್ಷಾತ್ ಇದಿರು ಬಂದು ನಿಲ್ಲುವಂತೆ ಸಾಹಿತ್ಯವು ಮಾಡದಿದ್ದರೆ ಅದರ ಸಾರ್ಥಕತೆ ಇಲ್ಲ. ಹೊಸಜೀವನದ ಅಂದಚೆಂದಗಳನ್ನು ಸೊಬಗು ಸೊಗಸುಗಳನ್ನು ಭವ್ಯತೆ ದಿವ್ಯತೆಗಳನ್ನು ಯಾವ ಹಳೆಯ ಸಾಹಿತ್ಯವೂ ಯಥಾರ್ಥವಾಗಿ ಬಣ್ಣಿಸಲರಿಯದು. ಹೊಸಕಾವ್ಯದ ಸಾಹಿತ್ಯದ ಅಗತ್ಯವು ಇದೆ. ಅಥವಾ ಅಗತ್ಯವನ್ನು ಸಿದ್ಧಾಂತಿಸಿ ಕೊಡುವ ಅಗತ್ಯವೂ ಇಲ್ಲ. ವಸಂತ ಮಾಸ ಬಂದರೆ ಸಾಕು–ಯಾವ ಮಾಮರವೂ ಚಿಗುರಲು ಯಾರ ಅಪ್ಪಣೆಯನ್ನೂ ನಿರೀಕ್ಷಿಸುವದಿಲ್ಲ.

ರಾಜಪ್ರಭುತ್ವದ, ಧರ್ಮಪ್ರಮುಖಮತಾಭಿನಿವೇಶವುಳ್ಳ, ಶಿಕ್ಷಣ ವನ್ನು ಮೀಸಲಾಗಿಟ್ಟುಕೊಂಡ ಹಳೆಯ ಕಾಲದ ಸಾಹಿತ್ಯದ ಭಾಷೆವಿಷಯ ಗಳು ಬೇರೆ; ಈಗಿನ ಪ್ರಜಾಪ್ರಭತ್ವದ ಹಾದಿಯಲ್ಲಿದ್ದ, ಸಮಾಜಸಂಸ್ಕಾರ ವನ್ನು ಬಯಸುವ ಸಾರ್ವತ್ರಿಕ ಶಿಕ್ಷಣವುಳ್ಳ ಈಗಿನ ಕಾಲದ ಸಾಹಿತ್ಯದ ಭಾಷೆವಿಷಯಗಳೇ ಬೇರೆ. ಹಿಂದಿನವರು ಭಾಷೆಯಲ್ಲಿ 'ದೇಶಿ'ಯನ್ನು ಕವಿರಾಜ'ಮಾರ್ಗ'ಕ್ಕೆ ಎಳೆದು ತರಬೇಕೆಂದರು; ಇಂದಿನವರು 'ದೇಶಿ'ಯ ಕವಿರಾಜ'ಮಾರ್ಗ'ಗಳನ್ನು ಸಿದ್ಧಪಡಿಸುತ್ತಲಿದ್ದಾರೆ. ಇದೇನು ಲೋಕ ವಿರುದ್ಧವಾದ ಆಚರಣೆಯಲ್ಲ. ಪ್ರಪಂಚದಲ್ಲಿ ಹೀಗೆಯೆ ಎಲ್ಲ ಕಡೆಗೂ ನಡೆದುಬಂದಿದೆ. ಈಗಿನವರ ಭಾವಪ್ರಪಂಚದ ವಿಸ್ತಾರದೊಡನೆ ಛಂದಸ್ಸೂ ಹಿಗ್ಗಿದೆ. ಇದರಲ್ಲಿ ಕೇವಲ ಪರಾನುಕರಣವಿಲ್ಲ. ಭಾವದ ಭಂಗಿಯನು ವೃತ್ತಮೂರ್ತಿಯಲ್ಲಿಯೆ ಅವತರಿಸುವಂತೆ ಯತ್ನಿಸುವದು ಪ್ರಶಸ್ತವಲ್ಲ ವೆಂದು ಯಾರೆನ್ನಬಹುದು ? ಅದಿರಲಿ.

ಇಲ್ಲಿ ನಮ್ಮ ಹಲವು ಗೆಳೆಯರ ಕೆಲವು ಕವಿತೆಗಳಿವೆ. ಇವು ರಸಿಕ ರಿಗೆ ರುಚಿಸಿದರೆ ಮತ್ತೆ ಇಂಥವುಗಳನ್ನು ಸಲ್ಲಿಸಬಹುದು. ಅಷ್ಟು ರುಚಿಸ ದಿದ್ದರೆ ಇವುಗಳಿಗಿಂತ ಚೆನ್ನಾದವುಗಳನ್ನು ಅರ್ಪಿಸಲಿಕ್ಕೆ ಪ್ರಯತ್ನಿಸುವೆ ವೆಂದೂ ನಂಬುಗೆಯಿದೆ.

**ಸಂಪಾದಕರು**

# ಪರಿವಿಡಿ

# ಅಂದು-ಇಂದು

ನಿನ್ನ ಅಡಿಯೊಳಿಡಲು, ಅಂದು,
ಕಂಪಿನಲರ ತಂದೆನೊಂದು
ಮೀಸಲೆಂದು ಮೂಸಲಿಲ್ಲ; ಆಸೆ ಅಡಗಿತು !

ಆಸೆಹುಳುವು ಹೂವನಂಟಿ
ಕಂಪನೆಲ್ಲ ತಾನೆ ಈಂಟಿ
ಅಡಿಯೊಳಿಟ್ಟ ಒಡನೆ ಹೂವು ಬಾಡಿಬಿಟ್ಟಿತು !

ಕಂಪಿನಲರ ತಂದೆನಿಂದು
ನಿನ್ನ ಅಡಿಯೊಳಿಡಲು ಎಂದು
ಮೂಸಿ ನೋಡಬೇಕು ಎಂಬ ಭಾವ ಹುಟ್ಟಿತು !

ಭಾವ ಹುಟ್ಟಿ ಮೂಸಿ ಬಿಟ್ಟಿ
ಹಿಗ್ಗಿ ನಿನ್ನ ಅಡಿಯೊಳಿಟ್ಟಿ
ಗಮುಗಮುಗಮು ಒಳಗು ಹೊರಗು ಕಂಪು ಇಡುಗಿತು !

— ಅಂಬಿಕಾತನಯದತ್ತ.

ಜುಲೈ, ೧೯೨೬.

From the words of the Poet men take what meanings please them; but their last meaning points to THEE.

TAGORE'

ಕವಿವಚನವನ್ನು ಬೇಕಾದವರು ಬೇಕಾದಹಾಗೆ ತಿಳಿದುಕೊಳ್ಳಬಹುದಾದರೂ ಅದರ ಕೊನೆಯು ಗುರಿ ನಿನ್ನನ್ನೇ ಕುರಿತಿದೆ.

-'ರವೀಂದ್ರನಾಥ'

## ಹಕ್ಕಿ ಹಾರುತಿದೆ! ನೋಡಿದಿರಾ?

ಇರುಳಿರುಳಳಿದು ದಿನದಿನ ಬೆಳಗೆ
ಸುತ್ತುಮುತ್ತಲು ಸೋಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆತೆರೆದಿಕ್ಕುವ ಹೊತ್ತಿನಒಳಗೆ,
ಹಕ್ಕಿ ಹಾರುತಿದೆ! ನೋಡಿದಿರಾ?

ಕರಿನರೆ ಬಣ್ಣದ ಪುಚ್ಚಗಳುಂಟು
ಬಿಳಿಹೊಳೆ ಬಣ್ಣದ ಗರಿಗರಿಯುಂಟು
ಕೆನ್ನನ ಹೊನ್ನನ ಬಣ್ಣಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು;
ಹಕ್ಕಿ ಹಾರುತಿದೆ! ನೋಡಿದಿರಾ?

ನೀಲಮೇಘಮಂಡಲಸಮ ಬಣ್ಣಾ
ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ !!
ಚಿಕ್ಕೆಯ ಮಾಲೆಯ ಸೆಕ್ಕಿಸಿಕೊಂಡು
ಸೂರ್ಯ ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ! ನೋಡಿದಿರಾ?

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲಗಿಂಡಲಗಳ ಗಡ ಮುಕ್ಕಿ
ತೇಲಿಸಿ ಮುಳುಗಿಸಿ ಖಂಡಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ
ಹಕ್ಕಿ ಹಾರುತಿದೆ! ನೋಡಿದಿರಾ ?

ಯುಗಯುಗಗಳ ಹಣೆಬರಹವ ಒರಸಿ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನಗೊಳಿಸಿ
ಹೊಸಗಾಲದ ಹಸುಮಕ್ಕಳ ಹರಸಿ,
ಹಕ್ಕಿ ಹಾರುತಿದೆ! ನೋಡಿದಿರಾ ?

ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ
ತಿಂಗಳನೂರಿನ ನೀರನು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳ ಲೋಕದ ಅಂಗಳಕೇರಿ,
ಹಕ್ಕಿ ಹಾರುತಿದೆ। ನೋಡಿದಿರಾ ?

ಮುಟ್ಟಿದೆ ದಿಙ್ಮಂಡಲಗಳ ಅಂಚ
ಆಚೆಗೆ ಚಾಚಿದೆ ತನ್ನಯ ಚುಂಚ
ಬ್ರಹ್ಮಾಂಡಗಳನು ಒಡೆಯಲು ಎಂದೊ ?
ಬಲ್ಲರು ಯಾರಾ ಹಾಕಿದ ಹೊಂಚ !
ಹಕ್ಕಿ ಹಾರುತಿದೆ। ನೋಡಿದಿರಾ ?

—ಅಂಬಿಕಾತನಯದತ್ತ.

ಡಿಸೆಂಬರ, ೧೯೨೮.

# ಮಯೂಸುರ

ಹಾಡಿದೊಡೆ ನಾಡು ನೋಡೀತು !
ನುಡಿಯ- । ನಾಡಿದೊಡೆ ಗುಡುಗು ನಡುಗೀತು !!

ಉಸುರಿದೊಡೆ ನಸುಕು ಹರಿದೀತು !
ರಸನೆ- । ಯೆಸಗಿದೊಡೆ ಸುಧೆಯು ಸವಿದೀತು !!

ತಿದ್ದಿದೊಡೆ ವಿಶ್ವವೆದ್ದೀತು !
ಬೆರಳ- । ನೆದ್ದಿದೊಡೆ ನರಕ ಬೆಳಗೀತು !!

ಕೋರಿದೊಡೆ ಕಲ್ಲು ಕೊನರೀತು !
ಮನದಿ । ಮೀರಿದೊಡೆ ಧರೆಯು ತೀರೀತು !!

ಮೆಚ್ಚಿದೊಡೆ ಮಣ್ಣು ಹಣ್ಣೀತು !
ನಿಚ್ಚ । ನೆಚ್ಚಿದೊಡೆ ಗುಟ್ಟು ಬಿಚ್ಚೀತು !!

—ರಾಮಚಂದ್ರ.

ಆಗಸ್ಟ, ೧೯೨೦.

ಹಕ್ಕಿ ಹಾರುತಿದೆ !

## ಸಲಿಗೆಯ ಸಲ್ಲಾಪ

ಎಲ್ಲೆಲ್ಲಿರುವಿಯೊ ಅಲ್ಲಲ್ಲೆಲ್ಲಾ ನಿನ್ನನು ಕಂಡೇನು –
ಇಲ್ಲಿಯೆ ಬಿಟ್ಟಿನ್ನೆಲ್ಲಿಯೊ ಹೋದರೆ ಅಲ್ಲೇನುಂಡೇನು !

ವನವಲ್ಲಿದ್ದವ ಮನೆಯಲ್ಲಿಲ್ಲವೆ ? ವನಚರನೇ ನೀನು ?
ಮನೆಯಲ್ಲಿದ್ದರೆ ಮತ್ತೇತಕೆ ತಡ ಬೈಲಿಗೆ ಬಾ ನೀನು !

ಸಾಧನೆಯಿಂದಲೆ ಸಾಧಿಸಿಕೊಳ್ಳಲು ಬೇತಾಳನೆ ನೀನು ?
ಹಾದರದವನಿಗೆ ಹುಟ್ಟಿದೆನೇನೋ ? ನಿನ್ನವನೇ ನಾನು !

ನೀ ಹುಟ್ಟಿಸಿದರೆ ಹುಟ್ಟಿದೆನಲ್ಲದೆ ನನಗಿಲ್ಲಿತ್ತೇನು ?
ನೀ ಹುಟ್ಟಿಸಿದವ ಹೊರಳಿ ನೋಡದಿರೆ ಗತಿಯೆನಗಿನ್ನೇನು ?

ಇದ್ದದ್ದಾದರೆ ಇದ್ದದ್ದಾಗಲಿ ಸುಮ್ಮನೆ ಇನ್ನೇನು ?
ಇದ್ದರೆ ಎತ್ತಿಕೊ ಇರದಿದ್ದರೆ ಬಿಡು ಯಾತರ ಹಂಗೇನು ?

ಇದ್ದರೆ ಬಂದೀ ಇರದಿರೆ ಬಿಟ್ಟೀ ಇದರೊಳಗುಂಟೇನು ?
ಇದ್ದಲ್ಲೆಲ್ಲಾ ಕಾಣಿಸಿಕೊಂಡರೆ ಹೋಗುವ ಗಂಟೇನು ?

ಇರುವಿಯೊ ಇಲ್ಲೋ ನನಗೇನೆನಿಸದು ಇದ್ದರೆ ಹೊಣೆಯೇನು ?
ಇರುವಿಯೆಂದು ಸುಮ್ಮನೆಯೆನ್ನಲು ನಿಮ್ಮಪ್ಪನ ರಿಣವೇನು ?

ನೋಡಿನೋಡಿ ಬೇಸರಿಸಿ ಜಗದ ಮನದಾಸೆಯೆ ಅಡಗುವದು
ಖೋಡಿಗುಣವ ನಿನಗಾರು ಕಲಿಸಿದರೊ ಕಾಣದೆ ಅಡಗುವದು ?

ಧಾರ್ಮಿಕರೆಂಬುವ ಧರ್ಮಗೇಡಿಗಳು ಜಗದಲಿ ತುಂಬಿವರು
ಧರ್ಮದ ತಂದೆಯೆ ಇಂಥವನಾದರೆ ಯಾತಕೆ ನಂಬುವರು ?

'ನಂಬದೆ ನೆಚ್ಚದೆ ಕರೆದರೆ ಬರುವನೆ' ಎಂಬರು ನಿಮ್ಮವರು !
'ನಂಬುವದೆಂತೈ ಆಡಿಸಿ ನೋಡದೆ' ಎಂಬರು ನಮ್ಮವರು !

ಮಾಮಾಕರ್ಮವ ಮಾಡಿದ ಮನುಜನೆ ಕಾಣೆನೆನುವಿಯೇನು ?
ನೀ ಮಾಡಿಸಿದರೆ ಮಾಡಿದೆನಲ್ಲವೆ ನನಗಿಲ್ಲಿತ್ತೇನು ??

ಕಂಬವನೊದ್ದರೆ ಕಿಡಿಕಿಡಿ ಬೆಂಕಿಯ ಕಾರುತೆ ಬಂದವನು
ನಂಬುಗೆಗೆಟ್ಟೆಂದೇಳಿಸುತಿದ್ದರು ಮಿಸುಕವನೆಂಥವನು ?

ಹಿಂದಿನಕತೆಗಳು ಹೊಗಳುವವಲ್ಲೋ ನಿನ್ನಯಕೀರ್ತಿಯನು
ಇಂದಿನ ಜಗದಲಿ ಮಾಡಿ ತೋರಿಸೋ ಆ ಪತಕೀರ್ತಿಯನು !

ಬಿಟ್ಟು ಬಿಟ್ಟೆನೀ ಹೇಸಿ ಜನ್ಮದಾ ಬರಿಯಾಸೆಯ ನಾನು–
ಸುಟ್ಟು ಹೋಗಲೀ ಸಂಶಯದಾಗರ ಬದುಕಿನೊಳಿನ್ನೇನು ?

ಸಾವಿಗೆ ಹೆದರುವ ಹಳೆಹೇಡಿಯೆ ನಾ ಬೇಯುವೆ ನಿನಗಾಗಿ–
ಗಾವಿಲರೆಲ್ಲರು ದೇವಿಲಿಯಾಗರೆ ಭಕ್ತನ 'ಬಲಿ' ಗಾಗಿ ?

ಗುಣವಂತರ ಗೋಳಾಟವೆ ಗಾವಿಲರಿಗೆ ಸಾಕಾಗಿಹುದು
ಒಣಮಾತೇನಿದು ? ನಾ ಸತ್ತರೆ ಬಲು ನಗೆಗೇಡಾಗುವದು !

ನಿನ್ನಯ ಬೆಲೆಯನು ನೀನುಳಿಸಯ್ಯಾ, ನಾ ಹೇಳುವದೇನು ?
ಚೆನ್ನಿಗರಾಯಾ ! ಕಿವಿಮುಚ್ಚದಿರೋ !! ಬೇಡುವೆನಿನ್ನೇನು ??? !

— ಚೆನ್ನಮಲ್ಲ.

ಜೂನ, ೧೯೨೬.

## ಮಿಂಚು

ಮೂಡಣದ ಮನೆಯಲ್ಲಿ ಸಿರಿವನಿಯ ಹುಡಿಯಲ್ಲಿ
ಅಡಗಿದರು ಬಿಡೆನು ನಿನ್ನಾ

ಮೋಡಗಳ ಬೀಡಿನಲಿ ನೇಸರಿನ ನಾಡಿನಲಿ
ಕೂಡಿದರು ಬಿಡೆನು ನಿನ್ನಾ!

ಚಂದಿರನ ಲೋಕವನ್ನು ಮಿಂಚುಗಳ ಮೊಕವನ್ನು
ಪೊಂದಿದರು ಬಿಡೆನು ನಿನ್ನಾ

ನಂದನದ ನೆರಳನ್ನು ರಂಭೆಯರ ಬನವನ್ನು
ಸಾರಿದರು ಬಿಡೆನು ನಿನ್ನಾ!

ತಾರೆಗಳ ಸುರೆಯಲ್ಲಿ ಹರಿವ ಝುರಿಮುರಿಯಲ್ಲಿ
ತಿರುಗಿದರು ಬಿಡೆನು ನಿನ್ನಾ ॥

ನಾರಿಯರ ಮೋರೆಯನು ಮೇರುವಿನ ಓರೆಯನು
ಸೇರಿದರು ಬಿಡೆನು ನಿನ್ನಾ!

ಬಗೆಮುಗಿಲು ಗದ್ದರಿಸಿ ಸಿಡಿಲೊಡೆದು ಹೊರಹೊರಟು
ಪ್ರತಿಭೆಯನೆ ದೂತಿ ಮಾಡಿ

ನಗುನಗುತೆ ನಿನ್ನ ಕರೆಕಳುಹುವೆನು ವಿಶ್ವಮೋಹಿನಿ
ಬಾರ ಬೇಗ ಓಡಿ!

ಗಿರಿಯಲ್ಲಿ ಝರಿಯಲ್ಲಿ ವನದಲ್ಲಿ ಮನದಲ್ಲಿ
ಮೂಡಿರುವ ಮೂರ್ತಿಯನ್ನು ॥

ಮರೆಯ ತೆರೆ ಹರಿದೊಗೆದು ಗುರುಭಕುತ ಕಂಡು
ಪೊಂದಿದನು ಆನಂದವನ್ನು!

ಮಾರ್ಚ, ೧೯೨೯. —ಧೂಲಾಸಾಹೇಬ.

## ತುತ್ತಿನ ಚೀಲ

ಅನ್ನಬ್ರಹ್ಮದ
ದೇಗುಲದಲ್ಲಿ
ಬೆಳಗೂ ಬೈಗೂ
ಛಿಳಿಛಿಟಿ ಬೆಂಕಿ
ಹೊಂಬರ ಪೂಜೆಯು
ಕಾಗೆಯ ಮಂತ್ರ
ಗಾಳಿಯು ಎಡೆಯು
ಬೊಬ್ಬೆಯು ಗಂಟೆ—
ಅನ್ನಬ್ರಹ್ಮದ
ದೇಗುಲದಲ್ಲಿ !

ನಾದಬ್ರಹ್ಮದ
ಕಗ್ಗವಿಯಲ್ಲಿ
ಮೌನದ ವೀಣೆಗೆ
ಕರುಳಿನ ತಂತಿ
ಮಿಡಿದೂ ಮಿಡಿದೂ
ಮುರಿದವು ಬೆರಳು
ಮಿಡುಕೀ ಮಿಡುಕಿ
ನೊಂದಿತು ಎದೆಯು—
ನಾದಬ್ರಹ್ಮದ
ಕಗ್ಗವಿಯಲ್ಲಿ !

ಶಬ್ದಬ್ರಹ್ಮದ
ಗುಮ್ಮಟದಲ್ಲಿ
ಹಗಲೂ ಇರುಳೂ
ವೇದದ ನಾದ
ಪಾಪಪುಣ್ಯಗಳ
ಜಾಳಿಗೆಯಲ್ಲಿ
ನೇತಿದೆ ಜ್ಯೋತಿಷ
ಜೀವದ ಜೇಡಾ
ಶಬ್ದಬ್ರಹ್ಮದ
ಗುಮ್ಮಟದಲ್ಲಿ !

ಧೈರ್ಯವುಳ್ಳವರಿಗೆ
ಭಯವೇ ಇಲ್ಲಾ
ತಿತ್ತಿರಿ ತುಂಬಿದೆ
ಕೂಳಿನ ಕೋಟಿ
ಬಿಡುಗಣ್ಣವರಿಗೆ
ಕಾಣುವದಿಲ್ಲಾ;-
ಅಮೃತದ ತೇಗಿನ
ಮುದವಂತಹದು !

ಹಸಿದವ ಬಲ್ಲಾ
ಹಸಿವೆಯ ಶೂಲೀ !
ಶಿವಾಶಿವಾ ಹೇ
ಶಿವಮಾದೇವಾ

ಅತ್ತಿತು ಕೂಗಿತು
ಚೀರಿತು ಜೀವಾ !
ಬಾಯುಂಗಳದಲಿ
ಹುಟ್ಟಿದ ಮಾತೂ
ಮುಗಿಲಿನ ಕಿವಿಯನು
ಮುಟ್ಟಲಿ ಇಲ್ಲಾ
ಹಾಡುವ ಸಭೆಯಲಿ
ಸರಳುವದುಂಟೇ ! —

ಕಿಕ್ಕಿರಿ ತುಂಬಿದೆ
ಭೂಮಿಯು ಕಣಜ
ಕಕ್ಕಸ ಬಡುತಿದೆ
ಬೊಕ್ಕಸದೊಡಲು
ಬರಿದೋ ಬರಿದೂ
ತೆರವೋ ತೆರವೂ
ಬಡವರ ಬಗ್ಗರ
ತುತ್ತಿನ ಚೀಲಾ !

ದೇವರದೊಂದು
ಗೋರಿಯು ಕಟ್ಟಿ,
ಧರ್ಮದ ಧೂಪಕೆ
ಬೆಂಕಿಯನಿಕ್ಕಿ,
ಗಣಗಣ ಬಾರಿಸಿ
ಪ್ರಾಣದ ಗಂಟೆಯ

ಸಾವಿನ ನೋವಿಗೆ
ಕಲಮಲವೆದ್ದು
ನೆಲವನ್ನೆಲ್ಲಾ
ತುತ್ತು ವೆನೆಂದು
ಗದರುತ್ತಿಹುದು
ಗರ್ಜಿಸುತಿಹುದು
ಬಡವರ ಬಗ್ಗರ
ತುತ್ತಿನ ಚೀಲದ
ಒಳಗಿನ ಒಳಗಿನ
ಬ್ಬೆಳದನಿಯೊಂದು

—ಅಂಬಿಕಾತ್ರಸಯ ಪತ್ರ.

ಜಾನೇವಾರಿ, ೧೯೩೯

## ಮೂವತ್ತು ಮೂರು ಕೋಟಿ

[ ಕಡೆಯಿಲ್ಲದ ಕತಲ ನಡುವೆ ಸ್ಥಿರಾಸನದಲ್ಲಿ ಭೂಮಿತಾಯಿಯು ಧ್ಯಾನಮುದ್ರೆಯಲ್ಲಿ ಕುಳಿತಿದ್ದಾಳೆ. ಅವಳ ಎಡತೊಡೆಯ ಮೇಲೆ ಭಾರತಿಯು ತನ್ನ ಮೊಗವನ್ನು ಬಲಗೈಯಿಂದ ಮುಚ್ಚಿ ಒರಗಿಸಿ ಎಡಗೈಯನ್ನೆತ್ತಿ ಹಾಡಿಹಾಡಿ ತನ್ನ ಪಾಡನ್ನು ತೋಡಿಕೊಳ್ಳುತ್ತಲಿದ್ದಾಳೆ. ಅವಳ ಸುತ್ತಲೂ ವಿವಿಧಾಕಾರದ ಕೋಟ್ಯಾವಧಿ ಪ್ರಾಣಿಗಳು ಅಸ್ತವ್ಯಸ್ತವಾಗಿ ಬಿದ್ದುಕೊಂಡಿವೆ. ]

ಮಕ್ಕಳಿವರೇನಮ್ಮ? ಮಕ್ಕಳಿವರೇನಮ್ಮ
ಮೂವತ್ತುಮೂರು ಕೋಟಿ ? ॥ಪಲ್ಲ॥

ಮೂವತ್ತು ಮೂರು ಕೋಟೀ, ಮೂವತ್ತು ಮೂರು ಕೋಟೀ !
ಮಕ್ಕಳಿವರೇನಮ್ಮ? ಮಕ್ಕಳಿವರೇನಮ್ಮ?
ಮೂವತ್ತು ಮೂರು ಕೋಟಿ ।
ನಾ ಹಡೆದ
ಮೂವತ್ತು ಮೂರು ಕೋಟಿ ॥ಅನುಪಲ್ಲ॥

ಮೂವತ್ತು ಮೂರು ಕೋಟೀ, ಮೂವತ್ತು ಮೂರು ಕೋಟೀ !
ಬಯಕೆಗಳು ಬಸಿರುಗಳು ಹಡೆದದ್ದು ಹಿಂಗಿದ್ದು
ಮೂವತ್ತು ಮೂರು ಕೋಟೀ !
ಸೂಲಗಳು
ಮೂವತ್ತು ಮೂರು ಕೋಟಿ !!

ಹಲಕೆಲವು ಹುಳುಗಳೆನ್ನೀ ! ಹಲಕೆಲವು ಕುರುಡುಕುನ್ನೀ !
ಕೆಲಕೆಲವು ಹುಚ್ಚುಕುರಿ ! ಕೆಲವು ಹೊಸಹೊಚ್ಚಮರಿ !
ಗಂಡುತನಕೇಸೊ ಸೊನ್ನೀ !
ಲೆಕ್ಕಕ್ಕೆ
ಮೂವತ್ತು ಮೂರು ಕೋಟಿ !!

ಅತ್ತೊಂದು ಹತ್ತು ಕೋಟೀ ! ಇತ್ತೊಂದು ಹತ್ತು ಕೋಟೀ !
ಸೋದರರು ಇದ್ದರೂ ಆದರದ ನುಡಿಯಿಲ್ಲ;
ಅತ್ತಿತ್ತ ಹತ್ತು ಕೋಟೀ ।
ಹೆಸರಿಗೇ
ಮೂವತ್ತು ಮೂರು ಕೋಟಿ !!

ಬೀತನರಪೇತುಗಳಿರಾ ! ಬಾತಂಥ ಪ್ರೇತಗಳಿರಾ !
ಮಣ್ಣನ್ನು ಮುಕ್ಕುವಿರಿ, ಮಸಣದಲಿ ಬಿಕ್ಕುವಿರಿ !
ಹಾರಿರೋ ಜೊಳ್ಳುಗಳಿರಾ !
ಉಸಿರಿಡುವೆ
ಮೂವತ್ತು ಮೂರು ಕೋಟಿ !!

ಸುಣ್ಣವನು ಸುರಿದ ಮೇಲೇ ಕಣ್ಣೀರನೆರೆಯೆ ಹಾಲೇ ?
ಬಣ್ಣ ಬಣ್ಣದ ಜೀವ ಕತಕತನೆ ಕುದಿಯುವವು
ಮನೆಯಾಯ್ತು ಮಲ್ಲಸಾಲೇ;
ಇದು ಬದುಕೆ ?
ಮೂವತ್ತು ಮೂರು ಕೋಟಿ !!

ಹಂಗಿನರಮನೆಯು ನರಕಾ-ತಂಗುವಿರಿ-ಇಹುದೆ ಮರುಕಾ ?
ಹಿಡಿಬೆರಳ ಹಿಡಿಯಲ್ಲಿ ಅಡಿಯೆರಡರಡಿಯಲ್ಲಿ
ಹೊರಳಿ ಒರಲುವಿರಿ ಅಕಟಾ !
ಅಕಟಕಟ !
ಮೂವತ್ತು ಮೂರು ಕೋಟಿ !!

ಹಾಳರ್ಧ ಹೊಲೆಯರೆಂದೂ ಬೀಳರ್ಧ ಹೆಣ್ಣು ಎಂದೂ
ಹೋಳುಹೋಳಾಗಿಹುದು; ಆಳುಬಾಳಾಗಿಹುದು
ಏಳಿರೋ ಆಳಿರೆಂಬೇ-
ಬಾಳಿರೋ
ಮೂವತ್ತು ಮೂರು ಕೋಟಿ !!

ಹಡೆದೊಡಲು ಬಂಜೆಯಾಯ್ತೇ ? ಬಾಳ್ಮೊದಲೆ ಸಂಜೆಯಾಯ್ತೇ ?
ಭಾರತಿಗೆ ತಲೆಭಾರ ಇರುವಳೆಂಬ ವಿಚಾರ--
ಬಾಳ್ವಣ್ಣು ಗಿಂಜು ಆಯ್ತೇ ?
ಬರಿ ಶೂನ್ಯ
ಮೂವತ್ತು ಮೂರು ಕೋಟಿ

ನನ್ನೆದೆಯ ಹಾಲನೆರೆಸೀ ನನ್ನೊಳಿಹ ಬೆಳಕ ಬೆರಸೀ,
ವಜ್ರದೇಹಿಗಳೆಂದೆ ಗೊನೆಮಿಂಚೊ ಎನೆ ಕಂಡೆ--
ವಿಜಯವಿರಲೆಂದು ಹರಸೀ
ಕಳುಹಿದೆನು
ಮೂವತ್ತು ಮೂರು ಕೋಟಿ !!

ಬಸುರಿನಲಿ ಪಡೆದುದೇನು ? ಹೊರಗಿಲ್ಲಿ ಹಡೆದುದೇನು ?
ಅರರೆ ! ಬಡಕೊಡಲುಗಳು ಸೆರೆಮನೆಗಳಾದುವೋ !
ನನ್ನಳಲು ಕೇಳದೇನೋ
ಎಲೆಲೇ
ಮೂವತ್ತು ಮೂರು ಕೋಟಿ !!

ಡಿಂಭಗಳನೊಡೆದು ಬನ್ನಿ ! ಕಂಭಗಳನೊಡೆದು ಬನ್ನಿ !
ಮೈಯಲ್ಲಿ ಮುದುಗದಿರಿ ! ಮನದಲ್ಲಿ ಅಡಗದಿರಿ !
ತಾಯಿ ಇದೊ ಬಂದೆವೆನ್ನಿ !
ನಾ **ಪಡೆದ**
ಮೂವತ್ತು ಮೂರು ಕೋಟಿ !!

— ಅಂಬಿಕಾತನಯದತ್ತ.

ಜಾನೇವಾರಿ. ೧೯೨೮

# ಕನಸಿನೊಳಗೆ ' ಕಣಸು '

( ತಾಯಿಮಕ್ಕಳ ಸಂವಾದ )

[ ಈಗಿನ ಕನ್ನಡನಾಡಿನ ಮತ್ತು ಕನ್ನಡಿಗರ ಸ್ಥಿತಿಗತಿಯ ಚಿತ್ರ ]

"ಯಾರು ನಿಂದವರಲ್ಲಿ–ತಾಯೆ" ಎಂದೆ !
"ಯಾರು ಕೇಳುವರೆನಗೆ- ಯಾಕೆ ತಂದೆ ?"

"ಬೇಸರದ ದನಿಯೇಕೆ ಹೆಸರ ಹೇಳಲ್ಲ"
"ಹೆಸರಾಗಿಯೂ ಕೂಡ ಹೇಳಹೆಸರಿಲ್ಲ"

"ನೀನಾರ ಮನೆಯವಳು ಮುತ್ತೈದೆ ಹೇಳು"
"ನಾನಾರ ಮನೆಯವಳೊ ಬಯಲನ್ನೆ ಕೇಳು"

"ಆಪ್ತರಿಲ್ಲವೆ ನಿನಗೆ ಇಷ್ಟರಿಲ್ಲೇ ?"
"ಗುಪ್ತರಾದರೊ ಏನೊ ಇಷ್ಟರಲ್ಲೇ"

"ಇರುವರೇ ಇದ್ದರೇ ಮಕ್ಕಳೆಂಬುವರು ?"
"ಇರುವರೆಂದರು ಕೂಡ ಯಾರು ನಂಬುವರು !"

"ಮನೆಯಿಲ್ಲವೇ ಇರಲು ಪರದೇಶಿಯೇನು"
"ಮನೆಯೆ ಮುನಿದೆದ್ದಿರಲು ಯಾ ದೇಶವೇನು"

"ನಿನ್ನ ಮಾತಿನಲಿಹುದು ಒಡಪಿನಂದ"
"ನನ್ನ ಹತ್ತರದೊಂದೆ ಉಳಿದಿಹುದು ಕಂದ"

"ರಾಜಮುಖಿ ನಿನ್ನಲ್ಲಿ ರಾಜಕಳೆಯಿಹುದು"
"ಸಾಜವಾದರು ಪಕ್ಷವಿದು ವದ್ಯವಹುದು"

"ಯಾವುದಾದರ ನಾಡದೇವಿಯೋ ನೀನು ?"
"ಭಾವುಕರ ಕಂಗಳಿಗೆ ದೇವಿಯೋ ನಾನು !"
"ಈಗ ಬಂದಿಹುದೇಕೆ ಏನು ಬೆಸನ ?"
"ಯೋಗವಿಲ್ಲದೆ ತಿಳಿಯದೆನ್ನ ವೆಸನ !"
"ಹಾದಿ ಯಾವುದು ಹೇಳು ಯಾವ ಯೋಗ ?"
"ಆದಿ ಅಂತವು ಇಲ್ಲದಂಥ ತ್ಯಾಗ !"
"ಬೇಡಬಂದಿಹೆ ಏನು ಏನಾದರೊಂದು ?"
"ಬೇಡಿದರೆ ಬೇಡಿದುದ ಕೊಡುವಿಯಾ ಇಂದು ?"
"ಅಹುದು ಕೊಡುವೆನು ಎಂದು ನಾನನ್ನಬಹುದೇ ?"
"ಬಹುದುಗಿಹುದಿನ ಶಂಕೆ ವೀರನಹುದೇ ?"
"ಹಿಂಜರಿವ ಅಂಜಿಕೆಯು ಹಿಡಿದಿಹುದು ಕೈಯ"
"ಮುಂಜರಿವ ಹುರುಪಿನೊಡ ಮುಂದೆ ಬಾರಯ್ಯ"
"ಇಲ್ಲೆನ್ನಲಾರೆ ನಾನಹುದೆನ್ನಲಮ್ಮೆ"
"ಬಲ್ಲವರು ದೈವವನು ಪರಿಕಿಸುವರೊಮ್ಮೆ"
"ಚಂಡಿ ಚಾಮುಂಡಿ ಪೇಳ್ ಬೇಕಾದುದೇನು ?"
"ಗಂಡುಸಾದರೆ ನಿನ್ನ ಬಲಿ ಕೊಡುವಿಯೇನು ?"
ಮನವು ನಡುಗಿತು ತನುವು ನವಿರಿಗೊಳಗಾಯ್ತು;
ನೆನವು ನುಗ್ಗಿತು-ಹೊರಗೆ ಕಂಡೆ-ಬೆಳಗಾಯ್ತು.

—ಅಂಬಿಕಾತನಯದತ್ತ.

ಜುಲೈ, ೧೯೨೫.

## ಬಿರುಗಾಳಿ

ಬಿರುಗಾಳಿಯೇನಗುರ್ವಿಸಿದಪುದೊ ! ಕಿನಿಸಿ ಕಿಂ-।
ಕಿರಿವೋಗಿ ಮುಯ್ಯುರ್ಬಿ ಪರ್ವಸಮುಯಕ್ಷುಬ್ಧ-।
ಶರಧಿವೊಲ್ ಶ್ರವಣಭೈರವರವಪ್ರೋದ್ದಾಮಮಾಗಿ ದಿಕ್‌ಸಂಧಿ ನಡಿಲೆ॥
ಇರುಳ ಕಳ್ತಲೆಯಳವಿಗಳಿದ ಕಾಳಿಮದ ಭೀ-।
ಕರತೆಯಂ ಪೆರ್ಚಿಸುತೆ ಬೇರ್ವೆರಸು ಕೀಳ್ತು ಪೆ-।
ರ್ಮರಗಳಂ ನೆಲಕುರುಳಿಸುತ್ತುಮೇಂ ಗರ್ಜಿಸುತೆ ಬಿಚ್ಚತಂ ಬೀಸಿದಪುದೊ!

ಎನಿತು ಪಿರಿದಾದೊಡಂ ಗಾಳಿಯದಕಿನಿತೆಂದು।
ದನಿ ? ಮಹಾತಿಮಿರಾಂಬುನಿಧಿತರಂಗೋತ್ಥಮು-।
ತ್ಸ್ವನಮಿದೆಲೆ ! ನೀರ್ ಘನಗ್ರಾವನಿಕರಾಹತಿಪ್ರೋದ್ಭಿನ್ನವೀಚಿವಾರಿ ॥
ಎನಿತು ನೊರೆವಿಂಡುಗಳ್ ಪೊಚ್ಚಳಿಪುವೋ ! ಮಿನುಗು-।
ತೆನಿತು ಸುತ್ತಲ್‌ಬಾಳೆಮೀನ್‌ಗಳುಚ್ಚಳಿಸುವುವೊ !
ಮನದೊಳೇಂ ಸ್ವಾತಂತ್ರ್ಯದಭಿಲಾಷೆಯೊಗೆದತ್ತೊ ಈಗಳೀ ದೃಶ್ಯದಿಂದೆ !!

ಎಲೆ ಇದೇನದ್ಭುತಮೊ ! ಈಗಳಿಂತೀ ಸೃಷ್ಟಿ।
ಜಲಪವನತಿಮಿರಸಂರಾವಂಗಳುಗ್ಗಡಕೆ।
ನೆಲೆಯಾಗಿ ತನ್ನೊಂದು ರೌದ್ರತೆಯಳುಂಬದಿಂ ಮೆರೆದೊಡಂ ಭೀತಿಯಿಂದೆ॥
ಚಲಚಿತ್ತನಾನಾದೆನಿಲ್ಲ ! ವಿಷಮತೆಯೊಳಂ।
ಲಲಿತತೆಯ ಮಾಧುರ್ಯಮಂ ಸವಿಯುತೆನ್ನ ಬಗೆ।
ನಲವಾಂತು ತಲ್ಲೀನಮಾದಪುದು! ಬಹುವಿಧಂ ಶಕ್ತಿಯುಲೆ ಈಸೃಷ್ಟಿಯಾ !!

— ಸಾಲಿ ರಾಮಚಂದ್ರರಾಯ

ಆಗಸ್ಟ, ೧೯೨೯.

# ಚೆನ್ನ !

ಭಿನ್ನ ಮತಗಳ ಜಗಳವೇತಕೆ
ಚೆನ್ನ ನೀನೊಬ್ಬನಿರಲು ?

ತೋಡಿಯಾದರು ಮೋಹನಮಾಕಾಂ-
ಬೋದಿಯಾದರು ನಾಟಿಯಾದರು
ಭೇದವಿಲ್ಲದೆ ನಿನ್ನ ನಾಮವ
ಪಾಡಲಲ್ಲವೆ ಎಲ್ಲವು ?

ಕಾವಿಯುಟ್ಟರು ಸೀರೆ ತೊಟ್ಟರು
ಠೀವಿಯುಡುಪನು ತೊಟ್ಟು ನಲಿದರು
ಆವ ವೇಷದಿ ಬಂದು ನಿಂತರು
ತಾಯಿ ಕಂದನ ತಿಳಿಯಳೇ ?

ಕಲ್ಲುಸಕ್ಕರೆ ತರುವಳೊಬ್ಬಳು
ಬೆಲ್ಲಬಾಳೆಯ ಹಣ್ಣನೊಬ್ಬಳು
ಇಲ್ಲದಳು ತಾ ಕೈ ಮುಗಿವಳು
ಎಲ್ಲ ನಿನ್ನಡಿಗಾಗಿರೆ !

—ಜಯಾಶ್ರಯಿ

ಫೆಬ್ರುವರಿ, ೧೯೨೨.

# ನನ್ನ ಕನ್ನಡ ನಾಡು

ಹಾಯ ! ಕರ್ನಾಟದಿತಿಹಾಸ ನನ್ನಭಿಮಾನ
    ಹೆಚ್ಚಿಸುವದಕ್ಕೆ ಬೇಕೇ ?
'ತಾಯಿ ತಾಯ್' ಎಂದು ಸಲೆ ಸಿದ್ಧಮಾಡಲು ಬಣಗು
    ಒಣ ತರ್ಕಶಾಸ್ತ್ರವೇಕೆ ?
ನನ್ನ ನಾಡಿದು ! ನನ್ನ ಕನ್ನಡದ ನಾಡು !
    ನನ್ನೆದೆಗೆ ಸವಿಯಾದ ಹಾಡು !
ನನ್ನ ಕರ್ನಾಟಕವು ನನ್ನ ರಾಜ್ಯವು ನೋಡು,
    ನನ್ನ ಸಂತಸದ ಬೀಡು !
ಕರ್ನಾಟಕದ ಧೂಳಿಯಿಂದ ಪಾವನನಾದೆ,
    ಹುಟ್ಟೆ ಕರ್ನಾಟದಲ್ಲಿ ! ೨೯
ಕರ್ನಾಟಕದ ಭಾಷೆಯಿಂದ ಭೂಷಿತನಾದೆ
    ಬೆಳೆದು ಕರ್ನಾಟದಲ್ಲಿ !
ಕನ್ನಡದ ನಾಡನುಡಿ ಕನ್ನಡದ ನಾಡಸಿರಿ
    ಎಲ್ಲಿಯೂ ಜಗದಿ ಕಾಣೆ !
ಕನ್ನಡದ ಕೋಗಿಲೆಯ ಕಮನೀಯ ಗಾನವನು
    ಪೇಳುವೆನು ದೇವರಾಣೆ !
ಮುತ್ತಿನಂತಹ ಜೋಳ, ಹವಳದಂತಹ ಗೋದಿ,
    ತಿಂದು ಸೊಗಸಾದ ತಿನಸು –

ಹೊತ್ತುಹೊತ್ತಿಗೆ ಜೇನಿನಂಥ ತುಪ್ಪವ ಸುರಿದು,
ಮಾಡಿದೆನು ಜೀವ ಸೊಗಸು !
ಉಕ್ಕುಕ್ಕಿ ಬರುವ ಕಡು ಮಮತೆಯಿಂದಲಿ ತಾಯೆ !
ನಿನ್ನ ಬಡ ಕುವರನಿವನು,
ಚಿಕ್ಕಂದಿನಿಂದ ತೊಳಲುತ್ತ ನಿನ್ನಯ ಪಾದ-
ಪೂಜೆಯನು ಕಟ್ಟುತಿಹನು !
ಹುಟ್ಟಿ ಮುಂಜಾವಿನಿಂದಿದ್ದು ಸಂಜೆಯತನಕ
ಕನ್ನಡದ ನಾಡಿನಲ್ಲಿ
ಕಟ್ಟಿ ಹಾಡುಗಳನ್ನು ನನ್ನ ತಾಯಿಯ ಮೇಲೆ,
ಬಾಡುವೆನು ಕಾಡಿನಲ್ಲಿ !

— ಶ್ರೀಧರ

ಅಗಸ್ಟ, ೧೯೨೦.

# ಹುಟ್ಟಿದ ಹಬ್ಬ

ಗಂಗೆತುಂಗೆಯರೆ ಔತಣ ನಿಮಗೆ ಮಂಗಲಸ್ನಾನವು ಇಂದಿದೆ ನಮಗೆ
ಸಂಗಡ ತನ್ನಿರೆ ತೀರ್ಥತೀರ್ಥಗಳ ಮೀಸಲ ಜಲವನ್ನು !

ಸಂಧ್ಯೆಯೆ ಆರತಿ ಎತ್ತಲುಬೇಕು–ಮನ್ಮಥ ಹೂವನು ತಂದಿರಬೇಕು
ರತಿ-ಸಿರಿ- ಶಾರದೆ ನಾಣ ಜಾಣ ಕಾಣಿಕೆಯೊಡ ಬರಬೇಕು !

ರಂಭೆಮೇನಕೆಯೆ ಕುಣಿವವರಂತೆ–ಶಾರದೆ ವೀಣೆಯೊಳಾಡುವಳಂತೆ ೫
ಸಮನಿಸು ಮಂಟಪ ವಿಶ್ವಕರ್ಮನೇ ಕುಸುರುಕುಸುರಿನಲ್ಲಿ !

ಗಾಯತ್ರಿ* ಸಾಮವ ಪಾಡುವದಾಗಿ–ಸಾವಿತ್ರಿ* ಮಂಗಲ ನೀಡುವದಾಗಿ
ಒಪ್ಪಿರೆ ಬನ್ನಿರೆ ಐದೆಯರೇ ಹೂವೀಳ್ಯದ ಔತಣಕೆ !

ಹುಟ್ಟಿದ ಹಬ್ಬವು–ಹುಟ್ಟಿ ಬನ್ನಿರೇ ಸ್ಥಲಜಲದಧಿದೇವಿಯರೆಲ್ಲಾ
ಹಸೆಯೊಳು ಕೂರುವ ಹೊಸ ಹೆಂಗೂಸನುಹರಸಲು ಸುರಸುದತಿಯುರೆಲ್ಲಾ!

× × × [೧೦

ಅರುಣಕಿರಣಗಳ ಗರ್ಭದಲ್ಲಿ ಅಂಕುರಿಸಿದ ಉಷೆಯಂತೆ
ರಾಗದಿ ರಂಜಿತವಾಗಲಿ ಜೀವಿತ ಲೋಗರು ಹಾಗರೆದೊಲಿವಂತೆ !

ಹುಡಿಯ ಹೊಟ್ಟೆಯಲ್ಲಿ ಮೂಡಿ
ಅಡಿಯ ಹಕ್ಕಲಲ್ಲಿ ಕೂಡಿ

ಗಾಳಿಬೆಳಕುಮಳೆಯೊಳಾಡಿ ಸೊಗಸ ಸುರಿಸುವಾ ೧೫
ನಗೆಯ ಮೊಗವದರಳುವಾಗ ಕಂಪನುಗಿಸುವಾ !

* ಶಿಥಿಲ

ಕಾಡಕುಸುಮದಂತೆ ನಕ್ಕು
ನಲಿದು ನೀನು ಸೊಗದಿ ಬಾಳು
ಮೇಲುಕೀಳು ಎಂಬುದೆಲ್ಲ ಅಳಿದು ಹೋಗಲಿ
ನಾಡದೇವಿಗೆಂದು ದೇಹ ಮುಡುಪದಾಗಲಿ ।

—ಸಂಗಮನಾರಾಯಣ

ಜೂನ, ೧೯೨೯.

## ನನ್ನ ಶಾಮು

ಪುಟ್ಟ ಮಗುವು ಶಾಮು ಆಗ
ವರುಷವೆರಡು ತುಂಬಲಿಲ್ಲ
ತಪ್ಪುನಡೆಯ ತೊದಲು ನುಡಿಯ
ಬೆಡಗಿನಾತನು
ನಮ್ಮ ಎದೆಯ ಕರುಳು-ಮರುಳು-
ನಲವು-ಬಳ್ಳಿ-ಅರಳು ಆತನು !

ಅವಳು ನನ್ನ ಮೋಹದರಸಿ–
ಕಿರಿಯ ಮಗುವ, ದುಕ್ಕದೊಡಲ-
ಕಾರು ಇರುಳಿನಲ್ಲಿ ನೂಕಿ
ನಡೆದಳೆಲ್ಲಿಗೆಲ್ಲಿಗೋ–ಅದೆಲ್ಲಿಗೊ !

ಬಾನಿನಂಗಳದ ಕರೆಯ-
ಲಾಡಬಂದ ಹೊಸಬ ಶಾಮು
ಬಾಳು ಆತಗಾಗಿ ಅಟ್ಟ
ಗೋಳಕೂಳನೇನು ಬಲ್ಲನು !

ತಲೆಯ ನನ್ನ ತೊಡೆಯ ಮೇಲೆ
ಕಣ್ಣನೆನ್ನ ಕಣ್ಣಿನಲ್ಲಿ
ಮನಸು ನೆನಸು ತನ್ನ ಎದೆಯ
ಮೋಹದರಸು–ಶಾಮುನಲ್ಲಿ
ಇಟ್ಟು ಒಮ್ಮೆ-ಒಮ್ಮೆ-ಯೆಂದು

ಸನ್ನೆಮಾಡಿ ಸುಮ್ಮನಾಗಿ
ಕಣ್ಣುಗೆಟ್ಟು ಬಿಟ್ಟು ನಡೆದ-
ಳೆನ್ನ, ತನ್ನ ಕರುಳ ಕೂಸನು !

ಅಂದು ನಮ್ಮ ಮನೆಯ ದೀಪ
ತಣ್ಣಗಾಗಿ ನೋವು ತನ್ನ
ರಾಜ್ಯ ನೆಲೆಸಿ ಚಿಕ್ಕ ಮಗುವ
ತನ್ನ ಒಡಲ ಮಡಲಿನಲ್ಲಿ
ಅಡಗಿಸಿಟ್ಟನು !

ಶಾಮು ಹೊರಗೆ ಅಂಗಳಲ್ಲಿ
'ಚಿಕ್ಕಹಕ್ಕಿ ಕತೆಯ ಹೇಳೆ
ಅಕ್ಕ ನನಗೆ ಹಾಡಕಲಿಸೆ
ಲಾಮುನಂತೆ ಆಡಕಲಿಸೆ
ಅಪ್ಪನಂತೆ ಕೂಡಕಲಿಸೆ'
ಎಂದು ಕಾಡುತಾಡುತಿದ್ದನು !

ಅಕ್ಕಗೆಲ್ಲ ತಿಳಿವು ಉಂಟು
ತಾಯ ಸಾವ ತಡೆಯದವಳು
ದುಕ್ಕ ಚಿಮ್ಮಿ ಅಳುವು ಹೊಮ್ಮಿ
ಮಗುವನಿಳಿಸಿ ಮರೆಯ ಬಳಿಸಿ
ಬಿಕ್ಕಿ ಬಿಕ್ಕಿ ಅಳುವದನ್ನು
ಅಕ್ಕರತೆಯ ಶಾಮು ಕಂಡು
ಬಳಿಗೆ ಹೋಗಿ ಹೆಳಲನೆಳೆದು
'ಅಳಲು ಬೇಡ ಅಕ್ಕ, ನಿನಗೆ
ಅಳಲು ಏನು ? ಹೇಳು' ಎಂದು

ಕಣ್ಣ ಮುತ್ತು ಸುರಿಸಿ ತಾನು
ಅಕ್ಕನಳಲ ನಗಿಸಲೆಂದು
ಮತ್ತೆ ಹೆಣಗುತಿದ್ದನು !

ಬಲ್ಲದೇನು ? ಆಗ ತಾನೆ
ನಲಿವುಮುಗಿಲಿನಿಂದ ಬಂದ
ಮಗುವು, ಜಗದ ದುಗುಡದಿರವ ??
ಆತನದನು ಅರಿಯದಿರಲಿ ಎಂದಿಗೂ--.

ಆಳು ಬಂದು ಅಕ್ಕನಿಂದ
ಮಗುವನೆತ್ತಿಕೊಂಡು ಹೋಗಿ
ಊರ ಹೊರದ ಗುಡಿಯಲಿರಿಸಿ
ಹಳ್ಳು ಕಲ್ಲು ಹಂಚು ಹಲಿಪಿ
ಕೈಯಲಿಡಲು ಆಡಹತ್ತಿ
ಶಾಮು ಅರಿಯ ತಾಯಿ ತನ್ನ
ತೊರೆದ ಪರಿಯನು !

ಶಾಮು ಮನೆಗೆ ಬಂದ ಹೊತ್ತು
ತಾಯಿ ಕರುಳ ಕುರುಹು ಅಂದು
ಮಾಯವಾಗಿ ಹೋಗಿಯಿತ್ತು
ಇನ್ನು ತಿರುಗಿ ಬಾರದೆಂದಿಗೂ--.

ತಾಯ ಕರುಳಿಗೆರವು ಆದ
ಮಗುವೆ! ನಿನಗು ಬಾಳಿನೊಡಲ
ಆಳದಲ್ಲಿ, ನೋವು ನೆನಸು
ಸಾವುಗನಸು–ತಪ್ಪದಿರುವವೆ ?!

ಅರಿಯ ಶಾಮು ತಾಯಿ ಹೋದ

ಪರಿಯು, ನೆರೆಯ ಹೊರೆಯ ಮನೆಯ
ಹೊಕ್ಕು ಹುಡುಕಿ ತೊಳಲಿ ಬಳಲಿ
ಕೊನೆಗೆ ನನ್ನ ಬಳಿಗೆ ಬಂದು
"ಅಪ್ಪ, 'ಅವ್ವನೆಲ್ಲಿಯೋ'–"
ಎಂದು ಕೇಳಿ ಕಾಡುವಾ !

ಸೀರೆ ಸೆರಗ ಕಂಡರಾತು,
'ಅವ್ವ' 'ಅವ್ವ' 'ಅವ್ವ' ಎಂದು
ಮಡಲಿನಲ್ಲಿ ಅಡಗಲೆಂದು
ಓಡಿಬರುವನು-!

–'ಇನ್ನು ಎಲ್ಲಿ ಅವ್ವ ನಿನಗೆ ?
ಮುದ್ದು ಮುಗ್ಧ ಮಗುವೆ ! ನೀನು
ಯಾರ ನೋಡಿ, ಏನ ಬೇಡಿ
ಎಲ್ಲಿಗೋಡಿ ಬಂದೆಯೋ!–

ಅವ್ವನಾಗದಿರಲು, ಶಾಮು
ಅಂಜಿ ನಾಚಿ ಬೆದರಿ ಗದರಿ
ಹಿಂದೆ ಹಿಂದೆ ಹೆಜ್ಜೆ ತೆಗೆದು
ಕಂಬದಲ್ಲಿ ಮೋರೆಯಿಟ್ಟು
ತಡೆಯುದಳುವು ಕೋಡಿಯೊಡೆಯೆ
ಓಡಿ ನನ್ನ ಬಳಿಯ ಸಾರಿ
ನೋಡಿ ಅಳುಕಿ ನೆಲಕೆ ಬಿದ್ದು
ಗೋಳು ಇಡುವದನ್ನು ಕಂಡು
ಕರುಳು ಕೊರೆದು ಮರುಗಿ ಕರಗಿ
ಹರಿದು ಹೋಯಿತು–!

ಒಮ್ಮೆ ಅಕ್ಕ ದೇವರೆದುರು
ದೀಪ ಹಚ್ಚಿ ಇಡುತಲಿರಲು
ಶಾಮು ಅವ್ವ ಸಿಕ್ಕಳೆಂದು
ಹಿಂದಿನಿಂದ ಹುದುಗಿ ಹೋಗಿ
ತೊಡೆಯನೆರಡು ಹಿಡಿದುಕೊಳಲು,
ಅಕ್ಕ ಮರುಗಿ ಕೆಲಸ ಬಿಟ್ಟು
ಎತ್ತಿಕೊಂಡು ಮುದ್ದು ಕೊಡಲು,
ಅವ್ವನಾಗದಿರಲು ಅವಳ
ಮೋರೆ ಹರಿದು ಚೀರಿ ಒದರಿ
ಮೈಯ ಕೊಸರಿ ಜೋಲುಬಿದ್ದು
ನೆಲಕೆ ನುಸುಗಿ ಹೊರಳಿಹೊರಳಿ
ಕಾಲು ಹೊಸೆದು ನೋಡುವವರ
ಎದೆಯನಿರಿದು, ಕಳಲಕೂಸು
ಅಳಲು ತೊಡಗಿತು–!

ಶಾಮುನಬಚಿ ತಂಗಿಯಳಿವ
ಕೇಳಿ ನೋಡಲೆಂದು ಬಂದು
ಅಕ್ಕರತೆಯ ದುಕ್ಕದಿಂದ
ಮೂಲೆಯಲ್ಲಿ ಕುಳಿತುದನ್ನು
ನೋಡಿ, ಸೆರಗು ಜಗ್ಗಿ ಎಳೆದು,
'ಅವ್ವ ! ಅಪ್ಪ ಕಲೆವ, ಬಾಲೆ'
ಎಂದು ಹಟವ ಮಾಡಿಮಾಡಿ
ಕಡೆಗೆ ನನ್ನಯೆಡೆಗೆ ಬಂದು
'ಅಪ್ಪ ! ಅವ್ವ ಸಿಕ್ಕಲೆ'ಂದು
ಚಪ್ಪಳಿಕ್ಕಿ ಕುಣಿಯುತಿರಲು

ನನ್ನ ಕಣ್ಣನೀರು ಸುರಿಯೆ
ಕಂಡು ಬೆದರಿ ಹಿಂದೆ ಸರಿದು
ಒತ್ತಿಯಿಕ್ಕಿ ಹಿಡಿದ ಕೈಯ
ಎದೆಯಲಿಟ್ಟು ನೋಡತೊಡಗಿದ !

ಓಣಿಯಲ್ಲಿ ಹೆಣ್ಣುಮಕ್ಕ-
ಳೋಡಿಯಾಡುವದೆ ಕಳವು;
ನೋಡಿ ಬಿರ್‍ರನೋಡಿ ಹೋಗಿ
ಬಾಗಿಲಲ್ಲಿ ನಿಂದು, ಒಂದು
ಕಾಲು ಹೊರಗೆ ಇಟ್ಟು, ಹಣಿಕಿ
ಇಕ್ಕಿ ಇಕ್ಕಿ ನೋಡಿ ನೋಡಿ
'ಅಲ್ಲ'ವೆಂದು ಕಣ್ಣು ತುಂಬಿ
ಅಳುತ ಮರಳುವ--!

ಕಂಡ ಕಂಡ ಹೆಣ್ಣಳನ್ನು
ಕಂಡು ಕಂಡು ತನ್ನ ಪ್ರೇಮ-
ನಿಧಿಯೆ ಎಂದು ಕೂಗಿ ಕರೆಯೆ,
ಅವರು ಮರಳಿ ಮಗುವ ಕಂಡು,
ಕರುಳು ಕರಗಿ ಮರುಗಿ, ಹುಚ್ಚು-
ಹರುಷ ತೋರಿ ನಗೆಯ ಬೀರಿ
ಮುದ್ದ ಬೇಡಿ ಮೊಗವ ತೀಡಿ
ಕ್ಷಣದ ಮುದವ ಮನಕೆ ನೀಡಿ
ಮುಂದೆ ನಡೆಯೆ, ಆಸೆಗೆಟ್ಟು
ಮಗುವು ತನ್ನ ಕರುಳು ಕಿವುಚಿ
ಬಾಯಿ ಬಿಡುವದು

ಅಪ್ಪನೆಂದು ಕರೆಯೆ, ಜನರು
ಮುಗ್ಧ ಶಾಮುನನ್ನು ಎತ್ತಿ
ಮುದ್ದುಕೊಡಲು–ಅವನು ಹೇಸಿ,
ಮಾನಹೋದ ಮೂಗನಂತೆ
ಕೆರಳಿ, ಮರಳಿ ಮುಂದೆ ಹೋಗಿ,
ಮತ್ತೆ ಅವರ ತಿರುಗಿ ನೋಡಿ,
ತನ್ನ ಎದೆಯ ಗೋಳನೆಲ್ಲಿ
ತೋಡಿಕೊಳಲಿ ಎಂದು ಬಗೆದು
ಬಗೆಯು ಹೆಳವವಾಗೆ, ಕಂದ
ಮರೆಯುಲಡಗುವ–!

'ತಾಯಿ ಎಲ್ಲಿ ? ಎಲ್ಲಿ ? ಇವರು
ನನ್ನನೇಕೆ ಎತ್ತಿಕೊಂಡು
ಮಾನಭಂಗ ಮಾಡಿಮಾಡಿ
ಚುಚ್ಚುತಿಹರು' ಎಂದೊ ಏನೊ–
ಹುಡುಗ ಹೋಗಿ ಹಾಸಿಗೆಗಳ
ಸುರುಳಿಗಳಲಿ ಹುದುಗಿ ಅಡಗಿ
ದುಕ್ಕದಿಂದ ನಾಚಿದಂತೆ
ಮೋರೆ ಮುಚ್ಚಿಕೊಳ್ಳುವ !

ತಾಯಿ ಹೋದುದನ್ನು ಅರಿಯ,
–ಎಂತು ತಿಳಿವ ಎಳೆಯ ಮಗುವು !
ಆಟಪಾಟ ಬಿಟ್ಟುಕೊಟ್ಟು
ಸುಮ್ಮನಿದ್ದು ನೆಲದಿ ಮೋರೆ
ಇಟ್ಟು, ಏನೊ ಏನೊ ಎಣಿಕೆ

ಹಾಕಿ ಹಾಕಿ ದಣಿದು ಕೂಸು,
–ಮಾಯದಿದ್ದ ಗಾಯವಿರಲು–
ನಿದ್ದೆಯಲ್ಲಿ ಅರ್ಧಕಣ್ಣು
ಮುಚ್ಚಿಯಿರಲು, ಕುಣಿಕೆಯಲ್ಲಿ
ಬೆಳಗಿನಲ್ಲಿ ಬೀಳಲಾದ
ಪಾರಿಜಾತದಂಥ ಮುತ್ತು
ತೊಳಗಿ ತೋರುತಿದ್ದಿತು !

ಏನೊ ತೊದಲುಯೆದೆಯ ಎಣಿಕೆ !
ಹೇಳಲಿಕ್ಕೆ ಹದನವಿಲ್ಲ ;
ಪಾಪ! ನನ್ನ ಶಾಮನೀಗ
ಕರುಣೆ ಕರಗಿ ಮುದ್ದೆಯಾಗಿ
ಮೂರ್ತಿ ಮೂಡಿದಂತೆ ನನ್ನ
ಕೊನೆಯು ಮೊದಲು ಇಲ್ಲದಂಥ
ಕರುಳಿನಳಲ ತೊರೆಯ ಮೇಲೆ
ತೇಲುತಿರುವನು–!

ದೇವ ನನಗೆ ತಾಯಕರುಳು
ಎದೆಯ ಹಾಲು ಕೊಟ್ಟರಾಗ,
ಹಾಲನೂಡಿ ಎರಕವುಣಿಸ
ಬಲ್ಲೆ–ಆದರಾದರೇನು ?
ತಾಯಿಯಲ್ಲ ! – ಹೆತ್ತು ಹಡೆದ
ಹೊಟ್ಟೆ ತಣ್ಣಗಿಲ್ಲ–ನನ್ನ
ಮುದ್ದುಶಾಮ ಎಂದಿಗೂ......
ಪರದೇಶಿ......ಪರದೇಶಿ......!

ಒಮ್ಮೆ ನಾನು ದುಕ್ಖದಿಂದ
ತುಂಬು ಮುಸುಕು ಹೊದ್ದುಕೊಂಡು
ಕೋಣೆಯಲ್ಲಿ ಮಲಗಿಯಿರಲು
ಮಗುವು ಮೆಲ್ಲನೆದ್ದು ಬಂದು
ಸಿಕ್ಕಳೆಂದು ಮುಸುಕನೆಳೆದು
'ಅಪ್ಪ ! ಏಲು ಏಲು, ನನಗೆ
ಹೊತ್ತೆ ಹಸಿವು; ಮೊಲೆಯನುಣಿಸು'
ಎಂದು ಅಚ್ಚೆ-ಇಚ್ಚೆಬಟ್ಟು
ಎಬ್ಬಿಸುತ್ತಲಿರಲು, ನಾನು
ಮನಸು ನಾಚಿ ಜೀವ ಹೇಸಿ
ಹೃದಯ ಕರಗಿ ಕ್ರೂರತನದಿ
ಮೋರೆ ಎತ್ತದಾದೆನು-!

ಇರುಳಿನಲ್ಲಿ ನಿದ್ದೆಗೆಟ್ಟು,
ನಡುವೆ ನಡುವೆ ಎದ್ದು ಕುಳಿತು,
ಏನೊ ಕಂಡಡಂತೆ ನೆನೆದು
ಅಪ್ಪನೆಂದು ಹಿಡಿಯಲೆದ್ದು
ಮಲಗಿದವರನೆಡವಿಬಿದ್ದು ಆಸೆಗೆಡುವನು

ಇನ್ನು ಎಲ್ಲಿಯಾಸೆ ಮಗುವೆ !
ಬನ್ನ ನಿನ್ನ ಬೆನ್ನು ಹತ್ತಿ
ತಿನ್ನಲಿರುವದಯ್ಯೊ ! ಬಾಳಿ–
ನಳಲುಗಡಲ ಬುರುಗಿನಂತೆ
ತಡೆಯಲಿದ್ದು ಮತ್ತೆ ಮತ್ತೆ
ತೊಳಲುತಿರುವದೆ !–

—'ವನಮಾಲಿ'

ಜುಲೈ, ೧೯೨೯.

## ಹಂಬಲ

ಅಂಬೆ ! ನಾನಿನ್ನೆಡೆಗೆ 'ಹಂಬಾ' ಎಂದು ಹಂಬಲಿಸುತ್ತಲೆ
ತುಂಬ ಕಂಬನಿಗರೆದು ನಂಬುತ ಬಂದೆ ಬೆಂಬಿಡದಿತ್ತಲೆ !

ತಾಯೆ! ನಿನ್ನೀಮುಗುವು ಲಗುಬಗೆಯಿಂದ ನಗೆನಗುತ್ತಿವುದು
ಮಾಯಮಮತೆಯ ಮುದ್ರೆಯಿಂದವನನ್ನು ಮುದ್ದಿಸಿ
ಕಾಯ್ವುದು !
ಬಂದು ಮಾನವಜನ್ಮಕಿಂದಿಗೆ ಮಂದಬಾಲ್ಯವು ಸಂದಿತು
ಎಂದು ಮನವರಳುವದೊ ತಿಳಿಯದು ಪ್ರಾಯವಂತೂ
ಬಂದಿತು !
ತರಲಮನಸಿನ ತರುಳನಿವ ಹುರುಳುಳ್ಳ ಕೆಲಸವ ಮಾಡಲು
ಬರಲು, ತಿರುಳಿನ ಬೆರಳು ಪಿಡಿಸುತ ಹಚ್ಚು ನಿಚ್ಚಳ ಹಾಡಲು !!

—ಗಂಗಾಪ್ರಸಾದ

ಸಪ್ಟಂಬರ, ೧೯೩೩

## ಮುದ್ದಿನ ಬಾಲೆ

ಮುದ್ದು ಕೊಡಲು ಬರುವಂತಹ ಬಾಲೆ
ಮುದ್ದಿನ ಮುದ್ದಿನ ಮುದ್ದಿನ ಬಾಲೆ !
ನೀನಿಲ್ಲದೆ ನಾನಿರಲಾರೆ
ನೀ ಬರದಲೆ ನಾ ಬರಲಾರೆ !

ನಲ್ಮೆಯ ನೋಟವು ಒಲ್ಮೆಯ ನಗೆಯು
ಚಂದ್ರಮ ನೀನಿರೆ ಇದೆನ್ನ ಬಗೆಯು
ನೀನೆಲ್ಲಿಯೊ ಅಲ್ಲೀ ಕಮಲ !
ನೀನೇ ವಿಮಲೆಯೆ! ಈ ಕಮಲ !

ಪ್ರೀತಿಯ ಚೆಲುವಿನ ತವರ್ಮನೆ
ನೀನೇ ನೀನೇ ಸ್ವರ್ಣಲನೆ !
ನೀನಿಲ್ಲದೆ ನಾನೇನಿಹೆ ತಾನೆ ?
ಬಾರೌ ! ಬಾರೌ ! ಸುಖನಯನೆ !

ಎಂದು ಕೊಡುವನೋ ದೇವರದೇವ !
ನಿನ್ನ ನೋಡಿ ನಲಿದಾಡಲಿ ಜೀವ !
ಮಾಗಿಸೆಂದು ಬೇಡುವೆನೀ ಬಯಕೆ !
ಆಗಿಸೆಂದು ಹೊರುವೆನು ಈ ಹರಕೆ !

ಸೌಂದರ್ಯವು ವಿದ್ಯೆಯಲಿದೆಯೆ ?
ಸೌಂದರ್ಯವು ಬುದ್ಧಿಯಲಿದೆಯೆ ?
ಸೌಂದರ್ಯವು ರೂಪದಲಿದೆಯೆ ?
ಸೌಂದರ್ಯವು ಗಾನದಲಿದೆಯೆ ?
ಪ್ರೀತಿಯು ನೋಟವೆ ಸೌಂದರ್ಯ !
ಪ್ರೀತಿಯು ಕೂಟವೆ ಸೌಂದರ್ಯ !

ಪ್ರೇಮಜೀವಿಗಳು ಪ್ರೇಮುವನರಸುತ-
ಪ್ರೇಮಿಸುವರ ಮೇಲ್ ಪ್ರೇಮುವ ಸುರಿಸುತ
ತವ್ಮಾಪ್ರೇಮುವ ನೆರೆ ನೋಡಿ
'ಸೌಂದರ್ಯವೆ!' ಎಂದರು ಹಾಡಿ !

ಮಾನವನಾರಿಸಲಾರನು ಚೆಲುವನು
ಆರವರರಿತರು ಚೆಲುವಿನ ನಿಲುವನು ?
ಕೊಡುವವನಿರುವನು ದೇವರದೇವ
ಆತನು ಕೊಡದಲೆ ಕಾಂಬದೆ ಜೀವ !

— ವಿನಾಯಕ

ಸಪ್ಟಂಬರ, ೧೯೨೯

# ಆಟ

ಆಡುವೆನು ಆಟವನು ಬಗೆಯ ಬಯಲಲ್ಲಿ ?
ನೀಡೆನಗೆ ದೇವ! ಜಯವೀಯಾಟದಲ್ಲಿ.
ನಾನೊಬ್ಬನೇ ಒಂದು, ಹನ್ನೊಂದು ಜನರವರು;
ಏನು ಮಾಡಲಿ, ತಿಳ್ಳಿಯಾಡಲ್ಕೆ ಕರೆಯುವರು.
ಒಳಗಾರು ಹೊರಗೈದು ಹುದ್ದರಿಗಳವರಿಹರು.
ಒಳಹೊರಗೆ ನನ್ನೊಬ್ಬನನ್ನೆ ಬಿಟ್ಟಿಹರು.
ಸುತ್ತೆಲ್ಲ ಮುಗಿಬಿದ್ದು ನನ್ನನ್ನು ಹಿಡಿದಿಹರು;
ಎತ್ತ, ನಾನೆಂತು ಅವರನ್ನು ಗೆಲ್ಲುವದು!
ಇರು ಅದಕೆ ದೇವ, ಹಿಂದೆನ್ನ ರಕ್ಷಕನಾಗಿ;
ಹೊರಿಸುವೆನು ಅವರಿಗೊಂದುಪ್ಪು ಚನ್ನಾಗಿ.
ಮನವೆ ಅವರಲ್ಲಿರುವ ಹಿರಿಯ ಹುದ್ದರಿತಾನು;
ಬಿಗಿಯಾಗಿ ಅವನನ್ನೆ ನಾನು ಕಟ್ಟುವೆನು,
ನೀಡು ದೇವನೆ ಇನ್ನು ಅಮಿತಧೈರ್ಯವ ನೀನು;
ಮಾಡಿ ಬಹು ಸಾಹಸವ ನಾನು ಗೆಲ್ಲುವೆನು;

—ನಾರಾಯಣ ಶಾಸ್ತ್ರಿ

ಏಪ್ರೀಲ, ೧೯೩೬

## ಚೆಲುವಿನ ಬೇಟೆ

ಹಗಲು ಮುಗಿವ ಸಮಯ; ದಿನಪ ಜಿಗಿಯಲಿದ್ದ ಬಾನಿನಿಂದೆ;
ಒಗೆದು ಸಂಜೆಗೆಂಪ, ತುಂಡು-ಮುಗಿಲುಗಳಿಗೆ ಬಣ್ಣ ಬರೆದು,
ಪಸಲೆನೆಲಕೆ ಸೊಬಗ ಸಲಿಸಿ, ಹಸುರಿನೆಲೆಯ ಕಳೆಯ ಬೆಳಸಿ,
ಮಿಸುನಿವಿಸಿಲ ಪಸರಿಸುತಲಿ ರಸೆಯನಾತ ರಂಜಿಸಿದ್ದ;

ಕಾಲವೇನೊ ಬಾಳ ಸೊಗಸು,
ಎಲ್ಲ ಕಡೆಗು ಚೆಲ್ಲ ಬೆಳಸು,
ಬಯಸಿತದನು ಉಣಲು ಮನಸು,

ಬಳಿಯಲಿರುವ ಗೆಳೆಯರನ್ನು ಬರಲು ಕರೆದೆನು;
ಹೊಳೆಯ ತಡಿಯ ತೋಟದೆಡೆಗೆ ಹೊರಟು ನಡೆದೆನು;

ಗೆಳೆಯರೊಡನೆ ಕೆಲೆದು ನಗುತೆ ಹೊಳೆಯ ಬಳಿಗೆ ಬರುತಲಿರಲು
ಬಲದ ಬದಿಗೆ ಹೊಂದಿಯೊಂದು ತಳಿತ ಹೊಂಗೆಮರವ ಕಂಡೆ;
ತಿಳಿಯ ಹಸುರಿನೆಳೆಯ ತಳಿರು ಬಳೆದ ಹಸುರ ಬಲಿತ ತಳಿರು
ಇಳಿದ ಬಿಸಿಲಿನೊಳ್ಪು ಹೊರೆದು ಸುಳಿವ ಗಾಳಿಗೊನೆದು ತೊನೆದು,

ಸೂಸುತಿದ್ದುವಲ್ಲಿ ನಗೆಯ,
ಸೂರೆಗೈದುವೆನ್ನ ಬಗೆಯ,
ಮುಂದಕಿರಿಸದಾದೆನಡಿಯ,

ತಳಿರ ಸೊಬಗಿನಲಿಯೆ ನೋಟ ನೆಲಸಿ ನಿಂದೆನು;
“ ಚೆಲುವನಿದನು ಕಳೆದು ನಡೆವುದೆಂತು ? ” ಎಂದೆನು;

ಒಡನೆ ಕೆಳೆಯರಿದ್ದರಲೇ? ನಡೆದು ಬಿಟ್ಟರವರು ಮುಂದೆ;
ತಡೆವುದೆಂತು ನಾನು ಹಿಂದೆ! ಹಾಗೆ ನಸುವೆ ನಿಂತು ಬಗೆದೆ;
ಮನವ ಸೆಳೆದು ಕೊಂಡ ತಳಿರ ಗೊನೆಯನೊಂದ ಮುರಿದುಕೊಂಡೆ;
ಎನಿತೊ ನಲುಮೆಯಿಂದಲದನು ತನುವಿಗೊತ್ತಿಕೊಳುತೆ ನಡೆದೆ;

ಅಡಿಯ ನಿಟ್ಟಿ ಬೇಗ ಮುಂದೆ,
ನಡೆದಿರುವರ ಸಾರಿ ಬಂದೆ;
ನಡೆಯಿತೆನಿತೊ ಮಾತು ಅಂದೆ;

ಓತು ತಂದ ಗೊನೆಯ ತಳಿರನೊಂದನೊಂದನು
ಮಾತಿನಲ್ಲಿ ಮರೆತು ಹರಿದು ಹಿಸುಕಿ ಒಗೆದೆನು;

ಬಂದೆವಾಗ ಬನಕೆ; ಒಡನೆ ಬಂದ ಕೆಳೆಯರವರು, ಕಲ್ಲಿ-
ನೊಂದು ಜಗುಲಿಯಲ್ಲಿ ಕುಳಿತು ಮುಂದೆ ಸಾಗಿಸಿದರು ಮಾತು;
ಕುಳಿತುಕೊಳ್ಳಲಿಲ್ಲ ನಾನು, ಉಳಿದೆನವರ ಬರಿದು ಹರಟೆ;
ಸುಳಿದು ಬರುವೆ ಬನದೊಳೆಂದು ಅಲೆದಾಡುತೆ ಹೀಗೆ ಹೊರಟೆ;

ಕಂಪಿನೆಲೆಯೆ ಗಿಡಗಳೇನು!
ಜೊಂಪಿನಲರ ಲತೆಗಳೇನು!
ಸೊಂಪ ನೋಡಿ ತಣಿದೆ ನಾನು;

ಎಡೆಯೊಳೊಂದು ಒಳುಗುಲಾಬಿ ಗಿಡವ ಕಂಡು ತಡೆದೆನು;
ಗಿಡದೊಳಿದ್ದುದೊಂದೆ ಅರಳ ಬೆಡಗನೇನನೆಂಬೆನು?

ಹಸುರ ತಳಿರ ತುತ್ತತುದಿಗೆ ಮಿಸುಕಾಡುತೆ ಮೆಲುಗಾಳಿಗೆ
ಎಸೆಯುವರಳ ಕಂಡು ಕಣ್ಣ ಹಸಿವು ಹೆಚ್ಚಿ ನಿಂತೆ ಹಾಗೆ;
"ಹಸರು ಸೀರೆಯುಟ್ಟು ಸೆರಗ ಮುಸುಕಿ ತಾಯಿ ಮಲಗಿಸಿರಲು
"ಮುಸುಕ ಸರಿಸಿ ತಾಯ ನೋಳ್ಪ ಹಸುಳೆಯ ಮೊಗವಿದುವೊ" ಎಂದೆ,

ನಲ್ಲ ಬಿನದದಲ್ಲಿ ನುಡಿದ,
ಲಲ್ಲೆ ಮಾತುಗಳಿಗೆ ನಾಚಿ,
ನಲ್ಲೆ ತನ್ನ ಸೆರಗ ಚಾಚಿ,

ಚೆಲ್ವ ಮೊಗವ ಮುಚ್ಚಿಕೊಳಲು ಸೆರಗು ಸರಿದು ತೋರುವ
ಗಲ್ಲದಂತೆ ಬೀರಿತರಳು ಹೊಸತು ಬಗೆಯ ಚೆಂದವ;

"ಇನಿದು ತಿನಿಸ ನಿನಗೆ ಕೊಡುವೆ ಕುಣಿಕುಣಿಯುತೆ ಬಳಿಗೆ ಬಾರೊ'
ಎನುತೆ ಕರೆಯೆ ನಮ್ಮ ಮುದ್ದ ಮಿನುಗುನಗೆಯ ಮೊಗದಿ ಬಂದು
ಕೈಯ ನೀಡಿ ಬೇಡಲದನು 'ಬಾಯನು ತೆರೆ' ಎನಲು ನಾನು,
ಬಾಯ ತೆರೆದು ನಿಲ್ಲಲವನ ಬಾಯಿ ಹೀಗೆ ಹೊಳೆವುದಲೇ?'

ಹೀಗೆಯೆನಿತೊ ಮನದಿ ಬಗೆದೆ;
ಎವೆಯಲುಗದೆ ನೋಡುತಿದ್ದೆ
ನೆಟ್ಟ ದಿಟ್ಟಿ ಕೀಳದಾದೆ;

ಕಳೆನೆನಿಂತದೇಸೊ ಕಾಲ ಬಳಿಕ ಮೆ-ಲ್ಲ-ಕೆ
ಅಲರ ಕೊಯಿದುಕೊಂಡು ಮರಳಿ ನಡೆದೆ ಹಿಂದಕೆ;

ಎತ್ತಿಕೊಂಡು ಹೂವ ಕೈಗೆ ಮುತ್ತು ಕೊಟ್ಟೆ ಮೋಹದಿಂದೆ,
ಒತ್ತಿಕೊಂಡೆ ಗಲ್ಲಗಳಿಗೆ, ಮತ್ತೆ ಮತ್ತೆ ಮೂಸಿ ನಲಿದೆ;
ಬೆರಳಿನಿಂದೆ ತಿರುಗಿಸುತಲಿ–ಮರಳಿ ಮರಳಿ ನಿರುಕಿಸುತಲಿ–
ಅರಿವು ಇರದ ತೆರದಿ ನಡೆದು ಬರುತೆ ಕೆಳೆಯರನ್ನು ಕಂಡೆ

ನಡೆದೆ ಇದ್ದಿತವರ ಮಾತು,
ಹರಟೆಗೆನ್ನ ಮನವೆಳಸಿತು,
ವಾದಚರ್ಚೆ ಬಲು ನಡೆಯಿತು;

ಹುರುಳು ಇರದ ಹರಟೆಗಳಿಗೆ ಮನವನಾಗ ಮಾರಿದೆ;
ಅರಳಿನೆಸಳನೊಂದೊಂದನು ಹರಿದು ಹೊಸೆದು ತೂರಿದೆ;

ಕೊನೆಯು ಕಾಣಲಿಲ್ಲ ಮಾತು, ದಣಿದು ನಿಲ್ಲಿಸಿದೆವು ವಾದ;
"ಮನೆಗೆ ತೆರಳೆ ಸಮಯವಾಯ್ತು" ಎನುತಲೆಲ್ಲರೆದ್ದೆವಾಗ;
ಕೆಳಗೆ ನೆಲದಿ ಬಾಡಿಬಿದ್ದ ಅಲರಿನೆಸಳುಗಳನು ಕಂಡೆ;
ಮರವೆ ತೊಲಗೆ ನನ್ನ ಹುಚ್ಚನರಿದೆ; ಹೀಗೆಯೆಂದು ಕೊಂಡೆ :

" ಅಲ್ಲಿ ತಳಿರ ಮುರಿದುದೇನು!
" ಇಲ್ಲಿ ಹೂವ ಕೊಯ್ದುದೇನು!
" ಮಾತಿಗೆ ಮರುಳಾದುದೇನು!

"ಒಲಿದು ತಂದ ಚೆಲುವಿನೊಡವೆ ಬರಿದೆ ಮಣ್ಣ ಬೆರಸಿದೆ;
"ಗಳಿಗೆಗಾಗಿ ಮಳಿಗೆ ಸುಡುವ ಮೂಳನಂತೆ ಮಾಡಿದೆ."

ಮುರಿದು ನಾನು ಕೆಡಿಸದಿರಲು ಮೆರೆಯುತಿದ್ದಿತಲ್ಲಿ ತಳಿರು,
ಹರಿದು ಹೊಸೆದು ಹಾಕದಿರಲು ಮಿರುಗುತಿದ್ದಿತಲ್ಲಿ ಅಲರು;
ಹಲವರದರ ಚೆಲುವ ನೋಡಿ ನಲಿವನಾನುತಿದ್ದರಲೇ ?
ಚೆಲುವ ಬೇಟೆಯಾಡಿ, ಕಣ್ಗೆ ಬಲಿಯ ಸಲಿಸಿಕೊಂಡೆನಲೇ ?

"ಇಳೆಯ ಕಳೆಯ ಕಿಡಿಯನೊಂದು
"ತೊಳೆದು ಬಿಟ್ಟೆ ನಾನು ಇಂದು"
–ನುಡಿದೆನಿಂತು ಒಳಗೆ ನೊಂದು,

ಬಗೆವ ಬಗೆಯ ಮುಗಿದ ಬಾಯ ದುಗುಡವೊಗೆದ ಮೊಗದಲಿ
ಮುಗುದನಂತೆ ನಡೆಯುತಿದ್ದೆ ಆಗ ನಾನು ಮಾತಿಲಿ;

* * * *

ಚೆಲುವಿಗೊಲಿದು ತಳಿರ ಅಲರ ಕೊಂಡುದೇನು ತಪ್ಪೋ ?
ಬಳಿಕ ಅದರ ಅಳಿವಿಗಾಗಿ ನೊಂದು ನುಡಿದುದೊಪ್ಪೊ ?

—ಆನಂದಕಂದ

ಜುಲೈ, ೧೯೩೯

# ಲಲ್ಲೆಯ ನೆನಹು

ಕಜ್ಜವಳಿದ ಕಾಲದಲ್ಲಿ
ಸಜ್ಜವನೆಯ ಮಂಚದಲ್ಲಿ
ತಲ್ಪದಲ್ಲಿ ಮಲಗಿ ಕಣ್ಣ
ಕಲ್ಪನೆಯನು ಕಲೆತು ಚಲ್ಲೆ
ಕೂಡೆ ದಿಟ್ಟೆ ಇದಿರು ಬಂದು
ಆಡಿ ಬಿಟ್ಟೆ ಚೆಲ್ಲ ಇಂದು
ಮೂಡಿ ಮರೆಸಿ ಎಲ್ಲವನ್ನು
ಊಡಿ ಉಳಿದ ಆಟವನ್ನು
ಸೊಗವು ಮನವ ತಣಿಸಿತು
ಸೊಗಸು ಎದೆಯ ಕುಣಿಸಿತು

ಕಂಡ ಕನಸು
ಉಂಡ ಸೊಗಸು
ತಿಂದ ಬೆಲ್ಲ
ಬಂದ ಸೊಲ್ಲು

ಮೆಯ್ಯ ಮರೆವು ಮಂದಹಾಸ
ಕೆಯ್ಯ ಕರೆವು ನಾಣ ವೇಷ
ಚಾಚಿ ದಿಟ್ಟೆ ಬಾಯು, ಮೋರೆ
ಕಲೆಯುದಂತೆ ಕೊಡುವ ಮುತ್ತು

ತಣಿಸದೆಂದು ಕುಣಿಸಿ ಕೊರಳ
ಮಣಿಸಿ ಹುಬ್ಬ ಇಣಿಕಿ ಕಂಡು
ಒಲಿಸಿ ಕಲೆಯುವಂತೆ ಮಾಡೆ
ಕೆನ್ನೆಯಲ್ಲಿ ಅಧರ ಮೂಡೆ
ಮುದ್ರಿಸಿತ್ತು ಸುಖವನು
ಭದ್ರವನ್ನು ಶುಭವನು !

— ಶಿವರಾಮ

ಅಕ್ಟೋಬರ, ೧೯೩೮

## ಏನಾರೆ

‘ಏನಾರೆ’ಬೇಕೆಂಬ ಹಟವು ಕಂದನಿಗಿಂದು
ಮತ್ತೇಕೆ ಬಂದಿತಯ್ಯಾ !
ನಾನೇನು ಹೊಸದಿದಕೆ ಕೊಡಲಿ ? ಈ ಕೆಟ್ಟ ಹಟ
ಸುಮ್ಮನೇ ಹೋಗದಯ್ಯಾ !
‘ನಿಂಗೇನು ಬೇಕಪ್ಪ ?’ ಎಂಬ ಮುದ್ದಿನ ಮಾತು
ಹಟಕೆ ಮದ್ದಾಗಲಿಲ್ಲ !
ಬಂಗಾರದೆಲ್ಲ ತರದಾಟಿಕೆಗಳಂ ಕೊಟ್ಟೆ;
‘ಏನಾರೆ’ ಹೋಗಲಿಲ್ಲ !
ಒಂದೊಂದು ತೋರಿಸಲು, ‘ಇದು ಒಲ್ಲೆ; ಏನಾರೆ
ತಾರೆ’ನುತ ಕಂದನೋಡೆ
ಮುಂದಿಟ್ಟೆ ಹೊಸದೊಂದು; ಹಳೆಯುದಾಯಿತು ಹೊಸದು;
ಕಂದನದ ನೋಡೆ ನೋಡೆ.
ಅಳುವ ಕೂಸಿನ ಕಂಡು, ಕಣ್ಮುಚ್ಚಿ ‘ಹುಲಿ ಬಂತು’
‘ಹುಲಿಬಂತು’ ಎಂದು ಕರೆಯೆ,
ಹುಲಿಗೆ ಅಂಜದೆ ಹಸುಳ ಲುಟುಲುಟನೆ ಬಂತು; ನಾ
ಮುಚ್ಚಿರ್ದ ಕಣ್ಣು ತೆರೆಯೆ.
ಏನಿದಕೆ ಕೊಟ್ಟರೂ ‘ಏನಾರೆ’ ಎಂದತ್ತು
ಬೆಂಡಾಯ್ತು ನನ್ನ ಮಗುವು;
‘ಏನಾರೆ’ ಎಲ್ಲಿಹುದು ? ದೇವ ! ನನಗದ ನೀಡು !
ನಾನಲ್ಲೆ ನಿನ್ನ ಮಗುವು ?

—ಬೇಂದ್ರೆ ಮಾಧವ

ನವೆಂಬರ, ೧೯೩೫

## ಅಯೋಧ್ಯೆ !

ಆವುದೋ ಶಿಖರವನ್ನೇರುತೇರುತ ಬಂದು
ನನ್ನ ಪ್ರೇಮುವ ಕೊಳುವ ಗೆಳೆಯನೊಡನೈತಂದು
ನಿನ್ನ ನೋಡಲು ಬಂದೆ; ಇದೊ ! ಕಾಣುತಿಹುದಲ್ಲ !
ಅದುವೆ ನಿನ್ನಯ ಗುಡಿಯು ಅಲ್ಲಿ ನಿನ್ನಯ ನಲ್ಲ !–

ಅಯೋಧ್ಯೆ !
ಯಾವ ಧೀರನ ಕನಸು ನೀನಾಗಿ ಜನಿಸಿತೌ !
ಯಾವ ಕವಿಕಲ್ಪನೆಯು ನೀನಾಗಿ ಅರಳಿತೌ !
ಪುಣ್ಯನಗರಿಯೆ ! ಅಂತು ನಿಂದ ನಿನ್ನಯ ಮೂರ್ತಿ
ಹುಲ್ಲು ಮಾನವನ ಕನಸಿನೊಳು ಕಂಡಿತು ಪೂರ್ತಿ,–

ಅಯೊಧ್ಯೆ !
ರಾಮುರಾಜ್ಯದ ಗುಡಿಯು ನೀನಿರುವ ಗುಡಿಮೇಲೆ
ಪಾಪ? ಪಾಪವೆ ಇಲ್ಲಿ ? ದೇವ ಕಲಿತನು ಸಾಲೆ !
ಕಾಮದಂಕುರವಿಲ್ಲ; ಸೀತೆ ಇಲ್ಲಿಯು ಬಾಲೆ
ಪುಣ್ಯನಗರಿಯೆ ! ರಾಮುನಾಣತಿಗೆ ಉಯ್ಯಾಲೆ !

ಅಯೋಧ್ಯೆ !
ಇಲ್ಲಿ ನೋಡೀ ಅಯೋಧ್ಯೆಯು ನೋಡು ನೋಡು;
ದೀನ ಜನಕಾಗಿಹುದು ಅತಿದೀನ ಬೀಡು;
ಕೇಳ ಬರುವದೆ ಇಲ್ಲಿ ಹಿಂದೆ ಹಾಡಿದ ಹಾಡು?
ಕಾಣ ಬರುವದೆ ಇಲ್ಲಿ ವೈಭವದ ಆ ನಾಡು, –

ಅಯೋಧ್ಯೆ !
ನಡುನಡುವೆ ಗುಡಿಗಳುಡುಗಣದಂತೆ ನಿಂತಿಹವು
ಆದರೀ ಸುತ್ತಿರುವ ಮನೆಗಳೇಕಿಂತಿಹವು ?
ನೋಡು; ಆ ಕಡೆ ನೋಡು ತುಂಗಶಿಖರದ ಮೇಲೆ;
ಅದು ಅಯೋಧ್ಯೆಯು ನಿಜವು; ದೇವ ಕಲಿತಿಹ ಸಾಲೆ !
ಅಯೋಧ್ಯೆ !

ಅಚ್ಚಳಿಯದಿರುತಿರುವ ಈ ಕಣ್ಣ ಹಬ್ಬವೂ
ಇನಿತು ಸುಂದರವಾಗಿ ಮಿಂಚಿನೊಲು ಮಿನುಮಿನುಗಿ
ಅಳಿದು ಹೋಗುವದೆಂದು ಅರಿತವರದಾರು ?
ಕಳ್ಳನಂದದಿ ಬರುವ ಕಾಲ ಶರಧಿಯ ಜಲವು
ನಿತ್ಯವೂ ಗುಡ್ಡದೋರೆಯು ಕೊರೆದು ಒಳನುಸುಗಿ
ಆ ಅಯೋಧ್ಯೆಯು ಮತ್ತೆ ಈ ಅಯೋಧ್ಯೆಯ ನಡುವೆ
ಬಂದು ನಿಂತಿಹುದು ನೀರು !

—ವಿನಾಯಕ

ಜುಲೈ, ೧೯೨೯.

ಪಕ್ಕಿ ಹಾರುತಿದೆ.

## ಅಗಲಿದ ಗೆಳೆಯನಿಗೆ

ಕಣ್ಮುಚ್ಚಿ ಕಣ್ದೆರೆಯುವಷ್ಟರೊಳು ಕಾಣದಾಗಿರುವ
ಹೊಸಗೆಳೆಯನೇ ಕೇಳು ಕೇಳು
ಕಣ್ಮುಚ್ಚಿಕೊಂಡರೂ ಕೂಗಿ ಕರೆಯುವೆ ನಿಲ್ಲು,
ಕಿವಿಗೊಟ್ಟು ಕೇಳು ಕೇಳು !
ಕಾಲಪುರುಷನ ವೇಳೆಗನುಗುಣದಿ ತಪ್ಪದಲೆ
ತಿರುಗುವದು ವಿಶ್ವವಿನ್ನು
ಬಾಳುವದು ಬೀಳುವದು, ನಮ್ಮ ಕೈಯಲ್ಲಿಲ್ಲ;
ಬಿಡಬೇಕು ಬನ್ನವನ್ನು !
ಸಾವೆಂಬ ಕನ್ನಿಕೆಗೆ ಮುಪ್ಪು ಮುಟ್ಟುವದಿಲ್ಲ,
ಆಯುಷ್ಯದಳತೆಯಿಲ್ಲ !
ಸಾವೆಂಬ ಕನ್ನಿಕೆಯು ಕಡೆತನಕ ತರುಣಿಯೇ-
ರೋಗಗಳ ಬೇಗೆಯಿಲ್ಲ !
ಒಳಗಣ್ಣಿನಿಂದ ನಾವ್ ಕಣ್ದೆರೆದು ನೋಡಿದೊಡೆ
ಕಾಣುವದು ದೂರದಲ್ಲಿ
ತಿಳಿಯಂದಾ ಬಯಲೊಳಗೆ ತಳವುಳಿಸುವರ ಮನೆಯು
ಹೊರಗಣ್ಣ ನೋಟಕ್ಕೆ ಕಾಣದಲ್ಲಿ !
ಇಂದಿಲ್ಲ ನಾಳೆ ಆ ಮುಂದಿನರಮನೆಯನ್ನು
ಮುಟ್ಟುವೆವು ನಾವೆಲ್ಲರು
ಬಂಧನದ ಬಲೆಯನ್ನು ಹರಿದು ಪಾರಾಗಲೂ
ಕಡೆಗೊಮ್ಮೆ ಜಿಗಿಯುವವರು !

ಕರುಣವಿಲ್ಲವೆ ಅವಗೆ ಕಾಲಕಾಲಕೆ ನೀರನೆರೆದು
ಬೆಳೆಸಿರುವ ಈ ಗಿಡದ ಮೇಲೆ
ಭರವಸೆಯನಿಡಬೇಕು ಹಗಲಿರುಳು ನಮ್ಮನ್ನು
ಸಲಹುತಿರುವವನ ಮೇಲೆ !
ತಾನೆ ಹೂಗಳಿಗಾಗಿ ಹಚ್ಚಿರುವ ಬಳ್ಳಿಗಳ
ಮೊಗ್ಗೆಗಳ ಕೊಯ್ವರುಂಟೆ !
ತಾನಾಗಿಯೇ ಬಂದು ತನಗಾಗಿ ತೆರೆದಿರುವ ಕುಸುಮವನು
ಕೊಯ್ಯಲದಕಡ್ಡಿಯುಂಟೆ ?
ಕಟ್ಟಿರುವ ಕೈ ಬಿಟ್ಟು ಕೊಟ್ಟಿದ್ದ ಕೈ ಕೊಸರಿ ನೆಟ್ಟನೇ
ನೀರಿನೊಳು ಧುಮುಕಿಕೊಂಡೆ !
ಕಟ್ಟಿ ಒಯ್ಯುವ ಕಸುವು ಕುಗ್ಗಿರಲು ನನ್ನನ್ನು ಬಿಟ್ಟು
ನೀನೊಬ್ಬನೇ ಮುಳಗಿಕೊಂಡೆ !
ಹೋಗಿ ಬಾರೈ ಗೆಳೆಯ ! ಬಾಗಿ ನಮಿಸುವೆ ನಾನು–
ಬೇಗ ನಿಮ್ಮಯ್ಯನೆಡೆಗೆ
ತ್ಯಾಗಿಯೇ ತಾಯ್ನಾಡಿಗಾಗಿ ತನುವನು ತೊರೆದೆ
ತೆರಳು ಸೌಭಾಗ್ಯನೆಡೆಗೆ
ಕಡೆಯ ಕಾಲಕೆ ಕೂಡ ಕೊಟ್ಟಿರುವ ಕರುಣವನು
ನಾನೆಲ್ಲಿ ಹೂಳಿಯಿಡಲಿ
ಕೊಡಲು ಕಟ್ಟಿದ ಕವನ ಕೊಟ್ಟಿರುವೆ; ‘ಶೇಷಶಾಯಿ’ಯು
ತಾನೆ ಕಾಪಾಡಲಿ !

— ಶೇಷ

ಡಿಸೆಂಬರ, ೧೯೨೪

ಹಕ್ಕಿ ಹಾರುತಿದೆ!

## ಬೀಸು, ತಾಯಿ !

ಬೀಸು ತಾಯಿ ! ಬೀಸು ತಾಯಿ !
ಬೀಸಿ ಬೇಗ ಬಾರ ತಾಯಿ !

ಗುರ್‍ರ್ರ ಗುರ್‍ರ್ರ ಎಂದು ಬೀಸಿ ಬೇಸರೇಕೆ ಇಲ್ಲ ನಿನಗೆ,
ಬಾರ ಬಾರ ಎಂದು ಮೊಲೆಯಕೂಸು ಕರೆದು ಮೊರೆಯುತಿರಲು,

ಬೀಸು ತಾಯಿ ಬೀಸು ತಾಯಿ
ಬೀಸಿ ಬೇಗ ಬಾರ ತಾಯಿ !

ನಿನ್ನ ಒಡನೆ ಕೈಯ ಹಿಡಿದ ಮರಗಳೆಲ್ಲ ಮರುಗುತಿಹವು
ಚಿನ್ನ ನಸುಕು ಮೂಡುತಿಹುದು, ನೇಸರಯ್ಯ ಬರಲು ಇರುವ–

ಬೀಸು ತಾಯಿ, ಬೀಸು ತಾಯಿ
ಬೀಸಿ ಬೇಗ ಬಾರ ತಾಯಿ !

ಹಿಟ್ಟು ಆಗಿ ಹೂವ ಹುಡಿಯು, ಸೃಷ್ಟಿ ತಾಯಿ, ಸುತ್ತು ಮುತ್ತು
ಹುಲ್ಲು ಪಟ್ಟ ನೆಲದ ಮೇಲೆ ದಟ್ಟವಾಗಿ ಬೀಳುತಿರಲು–

ಬೀಸು ತಾಯಿ, ಬೀಸು ತಾಯಿ,
ಬೀಸಿ ಬೇಗ ಬಾರ ತಾಯಿ !

ಬೀಸ ಹಾಕಿದಂಥ ಜಗದ ಸೊಗಸುಗಾರ ಕಾಣದಾದ
ಬೀಸಲಿರುವ ಬರಿಯಗಾಳಿ ಆಸೆ ತೋರಿ ಹಾಡಲಾದ–

ಬೀಸು ತಾಯಿ, ಸೃಷ್ಟಿಮಾಯಿ,
ಬೀಸಿ ಬೇಗ ಬಾರ ತಾಯಿ !

—ರಂಗನಾಥ

ಆಗಸ್ಟ, ೧೯೩೯

## ಕಂಬನಿ

ಹೇವ ಹಿಮ್ಮೆಟ್ಟಿಹುದು
ಜೀವ ಜಡವಾಗಿಹುದು !
ನೋವು ಸಾಕಾಗಿಹುದು
ಸಾವು ಬೇಕಾಗಿಹುದು !

ಜಡಿಯೆ ಸಿಡಿಲಿನ ಮಳೆಯು
ಕಡಿದು ಬಿದ್ದಿತು ಸುಳಿಯು !
ಮೊಗ್ಗೆಯರಳಲೆ ಇಲ್ಲ
ಸುಗ್ಗಿಯಾಗಲೆ ಇಲ್ಲ !

ಎಲರ ನಾಡಿನ ಸುದ್ದಿ
ತಿಳಿದು ಹೇಳುವರಾರು ?
ಉಲುವು ಬರುತಿದೆ ನಿನ್ನ
ಚೆಲುವನರುಹುವರಾರು ?

'ಮನದೊಳಗೆ ಮರುಗೇಕೆ
ನೆನಹಿನೊಳು ನೋವೇಕೆ ?
ಬಂದ ಒಡವೆಯು ನೋಡೆ
ಎಂದಾರೆ ಅಡಗುವದೆ !'

ಎಂದು ಒಳಗಿಂದೊಳಗೆ
ಒಂದು ನುಡಿಯೇಳುವುದು;
ಅಂದರೂ ಮಿಡುಕಿಹುದು
ಬಂಧನವು ಬಿಗಿದಿಹುದು !

ಏನು ಮಾಡಿದರೇನು
ಏನು ನುಡಿದರೆ ಏನು ?
ನಿನ್ನ ಮೀರುವರಿಲ್ಲ
ಅನ್ಯಶರಣರು ಇಲ್ಲ !

ನಿನ್ನ ಲೀಲೆಯು ಗುಟ್ಟು
ಬನ್ನ ಬಡಿಸುತಲಿಹುದು !
ಕಣ್ಣು ಮುಚ್ಚಿಕೆಯಾಟ
ಇನ್ನು ಸಾಕೆಲೊ ದೇವ !

—ರಾಮದಾಸ

ಮಾರ್ಚ್, ೧೯೩೯

## ಹೇವವಿರಲಿ !

ಆಗಸದ ಹಂದರದಿ ಇಳಿಬಿದ್ದ ಹಣ್ಣನ್ನು
ಸಾಗಿ ನೀ ಹರಿಯುತಿರಲು
ಭೋಗದಾಶೆಯು ಬೇಡ; ಕೈಗೆ ಬಂದಾ ಹಣ್ಣು
ಬಾಯಿಯಲಿ ಬೀಳದಿರಲು
ಭೋಗಪುರದಾಲಯದ ಬಾಗಿಲಕೆ ಬೀಗವಿದೆ;
ಕೂಗು; ಕದ ತೆರೆಯದಿರಲು
ಯೋಗಪದಗಳ ಹಾಡು; ಬೀಗ ಬಿಚ್ಚುವದು ನೀ
ಬಾಯಾರಿ ಬಿದ್ದು ಬಿಡಲು
ನಿನಗೆಂದೆ ಬಗೆಯದಿರು; ಮಿಡಿಯು ಹಣ್ಣಾಗುವದು
ಮೊಗ್ಗೆ ಹೂವಾಗುತಿಹುದು
ತನಗೆ ಆ ತುಂಬಿತುಳುಕುವ ರಸವು ಹಿಡಿಸದಿರೆ,
ಒಡೆದಿಂತು ಚಿಕ್ರಿಸುವದು !
ಹಕ್ಕಿಪಕ್ಕಿಗಳೆಲ್ಲ ಇಂಚರಕೆ ಮನಸೋತು
ನಿನ್ನ ಬೆನ್ನಟ್ಟುತಿರಲು
ಉಕ್ಕಿಬರುತಿಹ ನಿನ್ನ ಭಾವಗೀತೆಯ ಹಾಡು;
ನಿನ್ನವರೆ ಕೇಳದಿರಲು
ನಡುಹಗಲಿನಲ್ಲಡರಿ ಬರುವ ಮೋಡಗಳಾಚೆ
ನಲಿಯುತಿಹ ನೇಸರಿರಲು
ಕುಡಿಯ ಕತ್ತರಿಸೇಳು ನಿನ್ನ ನಡುವನೆ ಸೊಡರು
ಕಳೆಗುಂದಿ ಕೊರಗುತಿರಲು

*ಹಕ್ಕಿ ಹಾರುತಿದೆ !*

ಜೀವ ಜಾನಿಸಿನೋಡು; ಒಡಹುಟ್ಟಿದವರೆಲ್ಲ
ಹೊಡೆದು ಹೊರಗಟ್ಟುತಿರಲು
ಜೀವನದ ಜೋಗುಳವ ಹೇವದಿಂದಲೆ ಹಾಡು,
ಕಾವ ಕಾಪಾಡುತಿರಲು !

—ಬಿಂದುಮಾಧವ

ನವ್ಹೆಂಬರ, ೧೯೩೫

## ಶ್ರುತಾಶ್ರುತವೀಣಾರವ

ಮಿಂಚಿನಂದದಿ ಹೊಳೆದು ಹರಿಯುವವಳಾರೇ ?
ಚಂಚಲೆಯೆ ! ಚಲಮುಲನೆ ಚರಿಸುವವಳಾರೇ ?

ಮೆಯ್ಯಿಲ್ಲದವಳೆ, ನೀ ಮೈದೋರಿದಂದು
ಮೆಯ್ಮರೆಯಿತೀ ಜಗವು ನಿನ್ನಲ್ಲಿ ಸಂದು !

ನಿಂತಲ್ಲಿ ನಿಲ್ಲುವುದ ನೀನರಿಯದವಳು
ನಿಂತಲ್ಲಿಯೇ ನೆಲವ ನಿಲಿಸಬಲ್ಲವಳು !

ಸಪ್ತಭಂಗಿಗಳಿಂದ ಸುಳಿದಾಡುವವಳು
ಸುಪ್ತಿಯಲಿ ಸರ್ವವನು ಸೆರೆಹಿಡಿಯುವವಳು !

ಮೂಗೆಯೆಂಬೆನೆ ಮೆಚ್ಚು ಮಾತಾಡುವವಳು
ಮೂಗುವಡಿಸುವಿ ನುಡಿಯ ನೀನದೆಂಥವಳು ?

ಯಾವದೇಶದ ಹೆಣ್ಣೆ ? ಯಾವ ಭಾಷೆಯಿದು ?
ಅಕ್ಷರಕ್ಕಿದು ತಾನೆ ಸಾಕ್ಷಿಯಾಗಿಹುದು !!!

* * * *

ನಿನ್ನನೆಲ್ಲಿಯೊ ಎಂದೊ ನೋಡಿದಂತಿಹುದು
ನಿನ್ನ ನುಡಿಯುಲ್ಲೊಮ್ಮೆ ಆಡಿದಂತಿಹುದು

ಕೇಳುತಿರುವಂತೆಯೇ ತಿಳಿಯುವಂತಿಹುದು
ಹೇಳಬೇಕೆನುತಲೇ ತಿಳಿಯದಂತಹದು

ಯಾವ ದೇಶದ ಹೆಣ್ಣೆ ? ಯಾವ ಭಾಷೆಯಿದು ?
ಅಕ್ಷರಕ್ಕಿದು ತಾನೆ ಸಾಕ್ಷಿಯಾಗಿಹುದು !!!

ಆಪ್ತಳಂದದಿ ನಿನ್ನ ಮರೆಗಿರುವಳಾರು ?
ಗುಪ್ತಗಾಮಿನಿಯಾಗಿ ಗಮಿಸುವವಳಾರು

ನಿನ್ನ ಮೋರೆಯ ಮೇಲೆ ಅವಳ ಕುರುಪಿಹುದು
ನಿನ್ನ ನೋಡಿದ ಮನಕೆ ಅವಳ ನೆನಪಹುದು !

ಅವಳ ಬಣ್ಣಿಸಬಲ್ಲ ಬಾಯಿ ನನಗಿಲ್ಲ !!
ಆವಳ ಬಿಟ್ಟಿರಬಲ್ಲ ಶಕ್ತಿ ನಿನಗಿಲ್ಲ !!!

ಮಿಂಚಿನಂದದಿ ಹೊಳೆದು ಹರಿಯುವವಳಾರೇ ?
ಚಂಚಲೆಯೆ ! ಚಮಕಿಸುತ ಚಲಿಸುವವಳಾರೆ ?

—ಚೆನ್ನಮಲ್ಲ

ಮೇ, ೧೯೩೩

## ಇಂಚರಂ

ಇದು ಕಿವಿಗೆ ಸೊದೆ ಮನಕೆ ಸಂತರ್ಪಣಂ ! ಪೇಳ ।
ಇದು ನಿನಗೆ ಸಮನಿಸಿದುದೆಂತಮ್ಮ ! ನೋಂಪಿಯಾ-।
ವುದನೆಸಗಿ ಪಡೆದೆಯೀ ಪವಿಗೊರಲನೆನಿತೊಂದು
ಮೋಹನವೊ ಈ ದನಿಯೊಳು ! ॥
ಮುದಮಿಲ್ಲಿ ಮುದಮಲ್ಲಿ ಮುದಮೆತ್ತಲುಂ ನಾದ-।
ಮಿದು ತುಂಬಿದೆಡೆಯಲ್ಲಿ ! ನವಸುಮಂಗಳ ಮೆಲ್ಪು
ಮೃದುಸಮೀರದ ತಣ್ಪು ಬೆಳ್ದಿಂಗಳಿನ ನುಣ್ಪು
ಸೊಗಸಾಗೆ ಕೂಡಿದಪುವು ।
ಬಗೆಯಂಚೆಯಿಂಚರದ ತಿಳಿಗೊಳದ ತೆರೆಗಳೊಳ್ ।
ಪುಗುತಂದು ತಲ್ಲೀನಮಾದಪುದು ಸಂಸೃತಿಯು ।
ಬಿಗುವು ಸಡಿಲಾದಪುದು ಸಂತತದೊಳಿಂತಿರಲ್
ಬೇಕಲೇ ! ಹಾಡು ತಾಯೇ !
ಭಗವಂತ ನೀನಿಂತು ತಿಳಿಗಣ್ಗೆ ತೋರ್ದಪಯ್ |
ಬಗೆವಗೆಯ ಸೊಂಪಿನೊಳ್ ! ನೀನಲ್ಲದೊದವುವುದೆ
ಸೊಗಮಿನಿತು ನಿರ್ಮಳಂ ? ಮುಗಿಸದಿರ್, ಮುಗಿಸದಿರು !
ಹಾಡಮ್ಮ ಹಾಡು ಹಾಡು !
ತಂಗಿ, ನೀಂ ತಣಿಸಿದ್ದೆ ಗೀತದಿಂದೆನ್ನಂತ-।
ರಂಗಮುಂ ! ನಿನ್ನ ಸಾನೇನೆಂದು ಪರಸುವೆಂ ? ।
ಹೆಂಗುಸಿಗೆ ಕೂರ್ಪ ನಲ್ಲನೆ ಸಕಲಸಂಪತ್ತು !
ಪೂರ್ವಕೃತ ಸುಕೃತದಿಂದೆ

ಹಕ್ಕಿ ಹಾರುತಿದೆ !

ತಂಗದಿರನೆಂತಂತು ಮೃದುಲಸ್ವಭಾವನಂ ।
ನೀಂ ಗಡಾ ಪಡೆದೆಯೌ ಇನಿಯನಂ, ನಿನಗಿನ್ನು ।
ಮಂಗಳೆಯೆ ! "ಈಪ್ಸಿತಂ ಸಂಪ್ರಾಪ್ತಮಸ್ತುತೇ"
ಎಂಬುದೇ ಎನ್ನ ಪರಕೆ !

—ಸಾಲಿ ರಾಮಚಂದ್ರರಾಯ

ಜಾನೇವರಿ, ೧೯೩೮

## ಚೆಲುವು-ಒಲವು

### ೧

ಚೆಲುವು ಹಿರಿಯದೋ ?– ಹೃದಯ-
ದೊಲವು ಹಿರಿಯದೋ ?
ಚೆಲುವಿನಲಿಯೆ ಒಲವು ಇಹುದೊ ?
ಒಲವಿನಲಿಯೆ ಚೆಲುವು ಇಹುದೊ ?
ಇನಿಯನಗಲ ನೆನಸಿ ನೆನಸಿ ಮನೆಯಲಿರಲು ಬೇಸರೆನಿಸಿ,
ದಣಿದ ಮನವ ತಣಿಸಲೆಣಿಸಿ, ಬನಕೆ ಹೋಗಲೆನುತೆ ನಡೆದೆ;
ತಳಿರಿನೊಳುಪ ಕಂಡು ಕುಣಿದೆ, ಅಲರ ನಗೆಯ ನೋಡಿ ನಲಿದೆ,
ಚೆಲುವ ಬನದೊಳುಲಿದೆ, ಅಲೆದೆ, ಅಳಲ ಕೆಲವು ಗಳಿಗೆಯುಳಿದೆ;
ಇರಲು ಇಂತು ಏತಕೇನೊ ! ಬೆರೆತು ಹೊಯ್ತು ಬಗೆಯ ನಲಿವು,
ಕೊರತೆಯೇನೊ ಬೆರೆತ ತೆರದಿ, ತೋರಿತಾಗ ಬನದ ಚೆಲುವು
ತಳಿರು ಕಣ್ಣ ಕುಣಿಸದಾಯ್ತು, ಅಲರ ನಗೆಯು ತಣಿಸದಾಯ್ತು,
ಬನದ ಬೆಡಗದೆಲ್ಲಿ ಹೋಯ್ತೊ ? ಮನೆಗೆ ಬಂದೆ ಹಾಗೆ ಮರಳಿ;
ಚೆಲವು ಹಿರಿಯದೋ ?– ಹೃದಯ-
ದೊಲವು ಹಿರಿಯದೋ ?
ಬಗೆದು ಬಗೆದು ನಲ್ಲನಗಲ ದುಗುಡ ಮಿಗಲು, ಕಂಬನಿಗಳು
ಒಗೆಯುತಿರಲು, 'ಗಾನದಿಂದೆ ಬಗೆಯು ಸೊಗಸಬಹುದು' ಎಂದೆ;
ಕೊಳಲ ನುಡಿಸಿ ಅಳಲ ಮರೆತೆ, ಉಲಿಯೆ, ವೀಣೆಯದಕೆ ಬೆರೆತೆ;
ಮೆಲಪು ಬಲಿದ ರಾಗದೋರಿ ಕಳೆದೆ ಕಾಲ ಸೊಗವ ಸಾರಿ;
ಇದ್ದುದಿದ್ದ ಹಾಗೆ ಹೃದಯ ಎದ್ದು ನಡೆಯಿತೆಲ್ಲಿಗೇನೊ !
ಬಿದ್ದು ಹೋಯ್ತು ಗಾನದಲ್ಲಿ ಇದ್ದ ಸೊಬಗದೇತಕೇನೊ !

ಕೊಳಲ ಸವಿಯೆ ತಿಳಿಯದಾಯ್ತು ವೀಣೆಯುಲುಹು ಕಾಣದಾಯ್ತು,
ಚೆಲುವ ರಾಗದೆಳೆಯೆ ಹೋಯ್ತು, ಮಲಗಿ ಬಿಟ್ಟಿ ಹಾಗೆ ಮರಳಿ;

೨

ಚೆಲುವು ಹಿರಿಯದೋ ?– ಹೃದಯ-
ದೊಲವು ಹಿರಿಯದೋ ?
ಎಳೆಯ ಚೆನ್ನನೊಬ್ಬನಿಂದು ಉಲಿದು ನಲಿದು ಆಡಿಪಾಡಿ
ಕುಳಿತ ಜನರ ಕಣ್ಣ ಮನವ ಸೆಳೆದುಕೊಂಡ ಸೊಬಗನೂಡಿ;
ನೆರೆದ ಮಂದಿಯಲ್ಲಿ ಒಂದು ಕರಿಯ ಕೂಸನೆತ್ತಿಕೊಂಡ
ಗರತಿಯೊಬ್ಬಳವನ ಮೆಚ್ಚಿ ಕರೆದಳೆಡೆಗೆ ಆಗಿ ಹುಚ್ಚಿ
ಗದ್ದ ಮಿಡಿದು ಮೈಯ್ಯ ತಡವಿ ಮುದ್ದನೀಯಲಿರಲು, ತನ್ನ
ಮೊದ್ದು ಕೂಸು ಕೂಗಿ ಅಳಲು ಇದ್ದುದಿದ್ದ ಹಾಗೆ ಅವಳು
"ಅಮ್ಮ! ನನ್ನ ಹಡೆದ ತಾಯೆ ! ಸುಮ್ಮನಾಗೆ ಸೊಗದ ಕಣಿಯೆ !
ಅಳುವರೇನೊ ? ಕಣ್ಣಮಣಿಯೆ ! ಮೆಲುವುಮಾತಿನರಸುಗಿಣಿಯೆ !
ಏತಕಳುವೆ ನನ್ನ ಕಂದ ! ನಿಲ್ಲಿಸಳುವ ನಗುವ ಚಂದ !
ಕೊರಳ ಹೊನ್ನಸರದ ರನ್ನ ! ತೊಳೆದ ಮುತ್ತೆ ! ಹೊಳೆವ ಚೆನ್ನ ! "
ಎಂದು ಮಗುವನೆದೆಯಲಿಟ್ಟು ಒಂದೆಸಮನೆ ಮುತ್ತು ಕೊಟ್ಟು
ಕಂದನನ್ನು ಸಂತವಿಟ್ಟು ನಲಿವ ಪಡೆದಳು;
ಅಂದದೋರಿದೆಳೆಯ ಚೆನ್ನ ಬಂದು ಬಳಿಗೆ ನಿಂದು ಇರಲು
ಮುಂದೆ ಕರೆದು ಮುದ್ದನಿಡಲು ಮರೆತೆ ನಡೆದಳು;
ಚೆಲವು ಹಿರಿಯದೋ ?– ಹೃದಯ-
ದೊಲವು ಹಿರಿಯದೋ ?
ಚೆಲುವಿನಲಿಯೆ ಒಲವು ಇಹುದೊ ?
ಒಲವಿನಲಿಯೆ ಚೆಲವು ಇಹುದೊ ?

—ಆನಂದಕಂದ

ಮಾರ್ಚ, ೧೯೨೯

## ಒರ್ವದೇವಿ

“ಉರಿವ ಸೂರ್ಯನ ಕಣ್ಣು ಸಹ ಕುಕ್ಕಿಸುವ ರನ್ನೆ
ನೀನಾರು ದುಂದುಗಾರ್ತಿ ?
ಮೈಯ ನಿಂಬೆಯ ಬಣ್ಣವನ್ನು ಬೀರುವ ಹೆಣ್ಣು
ನೀನಾರು ಹೊನಹುಗಾರ್ತಿ ?
ಹೊಂಗೇದಿಗೆಯ ಸುಳಿಯು ಹಾಗೆ ಸುಳಿಯುತ ಬರುವ
ನೀನಾರು ಚೆಂದಗಾರ್ತಿ ?
ಜಗಮುಕುಟದಲ್ಲಿ ಹೊಂಗರಿಯಂತೆ ನರ್ತಿಸುವ
ನೀನಾರು ಚೆಲ್ಲಗಾರ್ತಿ ?
ಹೆಜ್ಜೆ ಹೆಜ್ಜೆಯ ಮುಂದೆ ಬಣ್ಣ ಬಣ್ಣಗಳಿಂದ್ರಚಾಪ
ಮೂಡಿಸುತ ಬರುವೆ !
ಹೆಜ್ಜೆ ಹೆಜ್ಜೆಯ ಹಿಂದೆ ಚಿಕ್ಕೆ ಚಿಕ್ಕೆಗಳನ್ನು
ಚಲ್ಲುಚಲ್ಲುತ್ತಲಿರುವೆ !
ಬಂದ ಬಂದಲ್ಲೆಲ್ಲ ಚಂದನದ ಚಂದವನು
ಸೂರೆಮಾಡುತ್ತ ತರುವೆ !
ನಿಂದನಿಂದಲ್ಲೆಲ್ಲ ನಂದನದ ನಂದನವ
ಧರಿಸುವದು ಸಕಲ ಪೊಡವಿ !
ನುಡಿನುಡಿಗೆ ಮುತ್ತುಗಳನುಗುಳುಗುಳಿ ಮುದ್ದು
ಮಂಟಪವನ್ನು ಮಾಡುತಿರುವೆ !
ನೋಟ ನೋಟಕೆ ಚೆನ್ನ ಮಿಂಚುಮಿಂಚಿನ
ಹೊನ್ನಿನಂಚನ್ನು ಹೆಣೆಯುತಿರುವೆ

ಪುಟನಡಿಗೆಯಾಟಕ್ಕೆ ಚಕ್ಕಂದದೋಟಕ್ಕೆ
ಮಾಟ ಸೆಲೆ ಪುಟಿಸುತಿರುವೆ !
ಮುಗುಳ ನಗೆಬಗೆಯನ್ನು ಮಿಗೆಯೊಗುತ ಜಗದಲ್ಲಿ
ಮುಗುಳುಗಳ ಚಿಗಿಸುತಿರುವೆ !

* * * *

“ನಾಡಿನೊಡೆಯನ ಬೊಕ್ಕಸದ ಗುಟ್ಟು, ಪೊಡವಿಯೊಡಲಿನ
ಕಣಿಯ ಕರಣಿ ನಾನು !
ಚಿನ್ನರನ್ನದ ತಳಪು, ಹಾಲುಬೆಳ್ಳಿಯ ಹೊಳಪು,
ಮುತ್ತುಗಳ ನೀರು ನಾನು !
ಒಕ್ಕಲಿಗರಕ್ಕರದಿ ಹರಹರಿಸಿ ಬರಬರುವ
ಮಳೆಬೆಳೆಯ ಭರವು ನಾನು
ಸುಗ್ಗಿ ಹರವುವ ಹರೆಯ ಬಾಳು, ಹೂಗಳ ಹುರುಳು
ಹಾಲ್ದೆನೆಯ ತಿರುಳು ನಾನು !
ನಲ್ಲರನು ನೋಡಿ ನೆರೆನಾಚಿ ನಿಲ್ಲುವ ನಲ್ಲೆಯರ
ಗಲ್ಲಕೆಂಪು ನಾನು !
ಮದದಾನೆಯೊಲು ನಡೆವ ಮಾನಿನಿಯ ಕೈಯುಗುರ
ಮದರಂಗಿ ಕೆಂಪು ನಾನು !
ತಾಯಿ ಸಲೆ ಚುಂಬಿಸುವ ಬಾಲಕನ ಚಂಬವಳ
ತುಟಿಯ ಕಡುಗೆಂಪು ನಾನು !
ಸಂಜೆ ಮುಂಜಾವುಗಳ ಕೆಂಬಾನ ಹೊಂಬಣ್ಣಗಳ
ಶಾಂತಿಕಾಂತಿ ನಾನು !
ಎಳೆ ಹುಲ್ಲು ಹಚ್ಚನೆಯ, ಗಿಳಿಚುಂಚು ಕೆಚ್ಚನೆಯ
ಕಣ್ಸೋಗೆ-ಕಪ್ಪು ಗೀಚು !

ಚಣ ಚಣಕೆ ಪಾರ್ವ ಪಾತರಗಿತ್ತಿಪಕ್ಕಗಳ
ಬಣ್ಣಬಣ್ಣಗಳ ಹುಚ್ಚು !
ಬಲುಚೊಕ್ಕ ಚಿಕ್ಕೆಗಳ ಚಿಕ್ಕಮಕ್ಕಳ ತಾಯ-
ಸ್ವರ್ಣದಿಯ ಬಸುರ ಕೆಚ್ಚು !
ಬಳ್ಳಿಬೆಳಕನು ಬೀರ್ವ ಕೋಲುಮಿಂಚಿನ ನಾಚು,
ನನ್ನ ಮಾನಸದ ಮೆಚ್ಚು !
ಎಲ್ಲಗ್ರಹಗಳ ಸೊಗಯಿಸುವ ಬೆಳಕು, ವಿಶ್ವ-
ಚಿತ್ರವ ಬರೆವ ಬಣ್ಣ ನಾನು ೨೫
ಜಗದಿ ಜಿನುಗುವ ಜಿನುಗು ಬೆಳಕಜಿನುಗನು ನೋಡಿ
ಬೆರಗಾದ ಕಣ್ಣು ನಾನು !
ಸಕಲ ವಿಶ್ವದ ರೂಪು–ನನ್ನ ಜರಿಯುವ ಮನುಜ
ಹಾಳಾದ ಬಾಳಿನವನು ;
ನನ್ನಾಳು ಬಲುಮರುಳು, ನನ್ನನಾಳುವ ಧೀರ
ವೀರ ನಿಜ ಜಾಣನವನು ! ”

—ರಾಮಚಂದ್ರ

ಆಗಸ್ಟ, ೧೯೨೦

## ನಸುಕು

"ಜಗಕೆಲ್ಲ ಬಿದ್ದಿತ್ತು ಇಷ್ಟು ಹೊತ್ತಿರುಳೆಂಬ
ಕಂಪಾದುದೊಂದು ಕನಸು !
ಹಗಲಿನ್ನು ಬಂದು ಬೆಳಕಿನ ಸೊಬಗು ಬೆಳಗುವದು;-
ಕನಸು ಆಗುವದು ನನಸು !
ಕನಸು ಕನಸೆಂದು ಕಂಗಳರು ಕನಕರಿಸುವರು;-
ಕನಸು ಕನಸಾಗಬಹುದೇ ?
ಜನಿಸದಿರೆ ಕನಸಿನೊಳು ನನಸು, ನೆನಸಿನ ಜಗವು
ಕನಸಾಗಿ ಸಾಗಬಹುದೇ ?

**ಕನಸು ನನಸಿನ ಕಸುಕು, ನನಸು ಕನಸಿನ ನಸುಕು** "
ಎಂಬ ಸವಿಗವನವನ್ನು
ಇನಿದಾಗಿ ಕಟ್ಟುತಿಹ ಕವಿಯಾಗಿ ಒಪ್ಪುವದು
ಬೆಳಗುಮುಂಜಾವು ಮುನ್ನು !
ಚಿಕ್ಕಿಯಾಗಿರುಳೆಲ್ಲ ಮುಗಿಲಲ್ಲಿ ನಗೆಮೊಗದಿ
ಆಟವನ್ನಾಡಿ ದಣಿದು
ಹಕ್ಕಿಯಾಗೀಗ ಸಲೆ ಹಾಡುತಿಹನಿಂಪಾಗಿ
ದೇವ ತಾ ಮನದಿ ತಣಿದು !
ಅಂದಲರ ಕಂಪಿನಿಂ ತಣ್ಣೆಲರ ತಂಪಿನಿಂ
ಪಾಡುಗಳ ಪೆಂಪಿನಿಂದ
ಕೆಂದಳಿರ ಕೆಂಪಿನಿಂ ಸೊಬಗೊಗೆವ ಸೊಂಪಿನಿಂ
ವೈದೋರ್ವಲಂಪಿನಿಂದ

## ನಸುಕು

ಒಪ್ಪಾಗಿ ಚಿಗುರುತಿಹ ಮೂಡಲದ ಬೆಳಕಿನೊಳು
ಸೊಗಸುಳ್ಳ ಮನದಲಿಂದು
ಒಪ್ಪುತಿರುವದು ಬೆಳಗುಮುಂಜಾವು ನುಣ್ಪುಳ್ಳ
ಬೆಳಕನೀರಿಂದ ಮಿಂದು !
ಚೊಕ್ಕಟವದೆಂತಹದೊ ! ಈ ಬಗೆಯ ಬೆಳಗು
ಮುಂಜಾವಿನಾ ಸೊಬಗು-ಸೊಗಸು
ಅಕ್ಕ ನಸುಕೇ, ಅಕ್ಕರದಿ ನಕ್ಕು ನನ್ನ
ಅಂತಃಕರಣದಲ್ಲಿ ಒಗಿಸು !

—ಪ್ರಲ್ಹಾದ

ಎಪ್ರಿಲ್, ೧೯೩೫

## ಕೃಷ್ಣೆಗೆ

ನೆಲದೆಂಗು ಸೀಯಾಳಿ! ನೆಲದಾಯಿ ನೊಲೆಹಾಲೆ!
ನೆಲಸೋಗೆಗೆಂಬನಿಯೆ! ನೆಲನಿಲಿಂಪರ ಗಂಗೆ!
ನೆಲದ ಚೆಲು-ನಲಿವುಗಳ ಕೀರಗಳ ನಡುಹರಿವ
ಅಮರರಮೃತದ ಧಾರೆಯೇ!

ಸಲಹೆಗಳ ಕಡಲಿಂಗೆ ಕೊಡಹೊರಟ ರಸವಂತಿ!
ಸಲೆ ಸಲುಹೆಗಾರ್ತಿ! ಸಲ್ಲುವಿಯಲ್ಲೆ ಮುದ್ದಾಗಿ!
ಚೆಲುಹಾಲುದೆನೆ ಮುತ್ತುಗಳ ಮುಡಿದ ಮುತ್ತೈದೆ-
ಬೆಳವಲದ ಜೈತಲಂತೆ!

ಬೆಂಗದಿರ-ತಂಗದಿರ ಚಿಕ್ಕೆಗಳ ಚೆನ್ನೆಸೆವ
ಬಂಗಾರ-ಹೂಚೆಟ್ಟು ಕಟ್ಟಿರುವ ತೊಟ್ಟಿಲಲಿ
ಸಿಂಗಾರ ಸಡಗರದಿ ಕುಳಿತಿರಲು ಜೋಗುಳವ
ಪಾಡಿ, ತಂಗಾಳಿ ತೂಗೆ;

ಇಂಗಿತದ ಇಂಗಿತವು ಕಂಗೊಳಿಸೆ ಕಂಗೊಳಿಸೆ
ಭಂಗದಂತಹ ಬೆಡಗು ಮುಂದಮುಂದಕೆ ಬಂದು
ಮಂಗಲಾಂಗನೆ, ನಿನ್ನ ಬಲಗೊಂಬೆ ಬಲಗೊಂಬೆ
ಎಂದು ಮುದ್ದಾಡಿತೆನ್ನ!

—ಚಿದಂಬರ

ಮೈ. ೨೯-೩-೩

## ನೀಲಗಿರಿ

ಮೂಡಲ ಪಡುವಲ
'ಗಿರಿ'ಗಳ ಸಾಲಿನ
ವನಗಳ ಮಾಲೆಯು
ತಳದಲಿ ತೊಳಗುವ
    ಚಿನ್ನ ರನ್ನವಿದು ಹಾ !
    ರನ್ನ ಚಿನ್ನವಿದು ಹಾ !

ಕನ್ನಡ ಕಡಲಿನ
ಕಂದನು ಕೃಷ್ಣನು
ನಿಜವನಮಾಲಾ-
'ನೀಲ'ರತ್ನವನು
ತನ್ನಯ ತಾಯಿಗೆ
ಒಪ್ಪಿಸಿದಂತಹ
    ಒಪ್ಪೆಂತಹದಯ್ಯಾ ?
    ಒಪ್ಪೆಂತಹದಯ್ಯಾ !

*　　　　*　　　　*

ಕನ್ನಡ ತಾಯಿಯ
ಮೋದದ ಪಾದದ
ಬಳಿಯಲಿ ಬಂದಂ-
ಗಳದಲಿ ಆಡಲು

ವಿಶ್ವಾನಂದದ
ನಂದನರಿಂಗೆ
ವಿಧಾತ ಗೈದಿಹ
ನಂದನವನ—ಆ-
    ನಂದನವನವಯ್ಯಾ !
    ನಂದನವನವಯ್ಯಾ !

—ಪ್ರಲ್ಹಾದ

ಫೆಬ್ರುವರಿ, ೧೯೨೯

## ಬೇಸಗೆ

ಕಾಡುಗಲ್ಲು ಬೆವರುವಂತೆ
ಮೋಡವೆಲ್ಲ ಕರಗುವಂತೆ

ಆಡುತಿಹನು ರವಿಯು ಗಗನದಂಗಳಲ್ಲಿಯೇ
ನಡೆಯುತಿಹನು ಹುಡುಗನಂತೆ ಬಯಲಿನಲ್ಲಿಯೇ !

ಏನು ಹಗಲು, ಉಲಿವೆ ಇಲ್ಲ
ಏನು ಇರುಳು ಬೇಸರಿಲ್ಲ

ಹೊತ್ತು ಮುಳುಗೆ, ಸತ್ತುಸತ್ತು ಉಳಿದೆವೆಂಬರು
ಮುತ್ತಿನಂಥ ತಾರೆಗಳನು ನೋಡಿ ನಲಿವರು

ಕುಸುರುಗೆತ್ತಿನಂಥ ಚಿಗುರು
ಹಸುರು ಹಚ್ಚ ಅಂಥ ಮೊಗರು

ನೊಸಲು ಬೆವರ ಮುತ್ತಿನಿಂದ ಬೆರಗುಗೊಳಿಪುದು
ಬಿಸಿಲು ಬೆಳ್ಳಿವಾಸಿನಂತೆ ಮಿರುಗುತಿರ್ಪುದು !

ಯೋಗಿ ಇರಲಿ, ರೋಗಿ ಇರಲಿ
ಭೋಗಿ ಇರಲಿ ತ್ಯಾಗಿ ಇರಲಿ

ಉಡಿಗೆ-ತೊಡಿಗೆ-ವಸನ-ವಸ್ತ್ರ ಬೇಡವೆನಿಪುದು
ಮಡಿಕೆ ನೀರು ಹುಳಿತಿಳಿಗಳು ಬೇಕು ಎನಿಪುದು

**ಹಕ್ಕಿ ಹಾರುತಿದೆ !**

ಅಡವಿಯೆಲ್ಲ ಕಾಳನಂತೆ
ಗಿಡಗಳೆಲ್ಲ ದೀನರಂತೆ

ಬಿಸಿಲಿನಲ್ಲಿ ಬಿದ್ದು-ನಿಂತು ತಪಿಸುತಿರುವವು
ಮಿಸುಕಿ ಮಿಸುಕಿ ಶಾಂತಿಜಲಕೆ ಬಾಯಬಿಡುವವು

ಕಳೆಯನುಳಿದ-ಗರ್ಭವತಿಯು
ಬಿಳಿಯ ಮೋಡ-ಮಂದಗತಿಯು

ಬೆವರು ಬೆರೆತು ಮೋರೆ ಒರಸಿ ಸಾಗುವಂತೆಯೆ
ತವರು ಮನೆಗೆ ಹಡೆಯಬರುವ ಸೊಸೆಯರಂತೆಯೆ !

ಮದುವೆಮುಂಜೆಗಾಗಿ ಹೊರಟ
ಮುದಿತರಂತೆ ಸಗ್ಗಜನರು

ಗಾಡಿಯೋಡಿಸುತ್ತ ಮುಗಿಲ ಗುಡುಗಿನಲ್ಲಿಯೇ
ಬೆಡಗಿನಿಂದ ಚರಿಪರವರು ಇರುಳಿನಲ್ಲಿಯೇ

—ಲಿಂಗಪ್ಪ

ಮೇ, ೧೯೩೯

# ಏನಿರಲಿಲ್ಲ ?

[ ತಪೋಭೂಮಿಯ ಅಧಿದೇವತೆಯಾದ ವನಲಕ್ಷ್ಮಿಯು 'ಶಕುಂತಲಾವಿಯೋಗ'ದಿಂದ ಕಾತರಳಾಗಿ ಮುಗ್ಧಳಂತೆ ಹೀಗೆ ಉದ್ಗಾರ ತೆಗೆದಿದ್ದರೆ ಅದರಲ್ಲಿ ಆಶ್ಚರ್ಯವೇನು ! ]

"ಚಂಡು ಮಲ್ಲಿಗೆಯ ದುಂಡಮೊಗ್ಗೆಗಳು ದಂಡೆಗೆ ಸಿಗಲಿಲ್ಲೇ ?
ಮುಟ್ಟಲು ಬಾಡುವ ಸಿರಸಲ ಹೂಗಳು ಕಿವಿಗಳಿರಲಿಲ್ಲೇ ?
ಮುಂಗುರುಳಲೆಯುವ ಮುಂದಲೆಗಿರಿಸಲು ಚಂದಳಿರಿರಲಿಲ್ಲೇ ?
ಎಳೆವೈದೊಳೆಯಲು ಜುಳುಜುಳು ಹರಿಯುವ ಝರಿಗಳು ಸಿಗಲಿಲ್ಲೇ ?
ಕಂಪುಳ್ಳಂಗಕೆ ತಂಪನ್ನೀಯಲು ಚಂದನವಿರಲಿಲ್ಲೇ ?
ನೋಡುತೆ ನಲಿಯಲು ಫಲಫಲ ಚಿಗಿತೆಳೆವಳ್ಳಿಗಳಿರಲಿಲ್ಲೇ ?
ಬಿರಿಮೊಗ್ಗೆಯ ಗೊಂಚಲುಗಳು ಹಾರಕೆ ಇರಲಿಲ್ಲವೆ ನಿನಗೆ ?
ಎಳೆಯೆಲೆಗಳ ನಳನಳಿಸುವ ಹಾಸಿಗೆ ಹಾಸಿಲ್ಲವೆ ನಿನಗೆ ?
ಹೆಳಲಿಗೆ ಮುಡಿಯಲು ಕಂಪಿನ ಕೇದಗೆ ಬನದೊಳು ಬೆಳೆದಿಲ್ಲೇ ?
ಕಾಲಿಗೆ ತೊಡೆಯಲು ಅಲತಿಗೆ ರಸವೂ ನನ್ನಲ್ಲಿರಲಿಲ್ಲೇ ?
ಇನಿತೊಂದಿರಲೂ ನನ್ನಿಂದಗಲಲು ಮನ ಬಂದಿತೆ ನಿನಗೆ ?
ಏತಕೆ ನನ್ನನು ತೊರೆದು ಹೋದೆ, ಶಾಕುಂತಳೆ ಬೇಡಿಡೆಗೆ ? "

—ರೇವಣ

ಜೂನ, ೧೯೩೩

## ಹೊಸಕಾಲದ ನವಿಲು !

ಮನದಣಿ ಕುಣಿಯುತ ಕೇಕೆಯ ಹಾಕುತ
ಮರಡಿಯ ಮೇಲಣ ಹಸುರಲಿ ಹಾರುವ
ಹೊಸಕಾಲದ ನವಿಲು !

ಬೇಸಗೆ ಬೇಗೆಯು ಹಳೆಯದನೆಲ್ಲವ
ಸಾಸಿರ ನಾಲಿಗೆಯಿಂವಲಿ ಸವರಲು
ಪೂಸಿ ಎರೆಯಲಿಳೆತಾಯಿಯ ತವಕದಿ
ಸಾಸಿರ ರೂವಿಲಿ ಕಾರಿನ ನೀರೆಯು

ಬೇಗದಿ ಬಂದಿರಲು,
ಕುಣಿವುದು ಹಗಲಿರುಳು
ಹೊಸಕಾಲದ ನವಿಲು !

ಬಂದಿತು ಮಳೆಗಾಲವು ಅಳಿಗಾಲವು
ಬಂದಿತು ಎನ್ನುತ ಬನದೊಳಗಿನ ದ್ವಿಜ-
ವೃಂದವು ತಾವೇ ತಾವೆಯೆ ಮಾಡಿದ
ಬಂದಿಯ ವಾಸವನೊಡನೆಯೆ ಸೇರಲು

ಒಂದೇ ಒಂದೆಯದು
ನಿಂದದೆ ನೊಂದದೊಲು
ಹೊಸಕಾಲದ ನವಿಲು !

ಮೆರೆದೆವು ಮಾಸದ ಬೇಸಿಗೆ ಬಿಸಿಲಲಿ
ಪೊರೆದೆವು ಜಗವನು ನೆಳಲಿನಲೆನ್ನುತ
ಹಿರಿತನದಿಂದಲಿ ನಿಂತಿಹ ಮರಗಳು
ತಿರೆಯನು ಬಿರಿಯುವ ಬಿರುಮಳೆ ಬಂದಿರೆ

ಅತಿ ಆತಿ ಅದುರಿರಲೂ
ತನನನ ಕುಣಿವುದಿದೂ
ಹೊಸಕಾಲದ ನವಿಲು !

ಪಸೆಯನು ತಂದಿತು ಸಸಿಯನು ತೋರಿತು
ಪೊಸಪೊಸವೂಗಳ ಕಣ್ಣನು ತೆರೆಯಿತು
ಕಸುಕಿನ ನೆಲದಲಿ ಹಸುರನು ಹಾಸಿತು
ಪೊಸಕಾಲವಿದೆಂದಾನಂದದಲಿಯೆ

ಮೈಮರೆಯುತ ಮರುಳು
ಕುಣಿವುದು ಹಗಲಿರುಳು
ಹೊಸಕಾಲದ ನವಿಲು !

ಕೊಳೆತಿಹ ಹುಳಿತಿಹ ಕಂದಿಹ ಕಮರಿಹ
ಹಳೆಯುದ ಕುಲವನು ಗಳಮನೆ ನುಂಗಲು
ಮಳೆಮೋಡದ ರಕ್ಕಸರೈದಿರುತಿರೆ
ಸೆಳೆಮಿಂಚಿನ ಹಲ್ಲುಗಳಾಡಿಸುತಿರೆ

ನಲಿವುದು ಹಗಲಿರುಳು
ನಿಲುವುದು ದಣಿಯದೊಲು
ಹೊಸಕಾಲದ ನವಿಲು

ಬಾನಿನ ಬಯಲೊಳು ನಡೆದಿಹ ಬವರದಿ
ಕಾಣದ ಗುಡುಗಿನ ಗುಟ್ಟನು ಕಂಡೊಲು
ಮಾಣದ ವೈಭವವಾದ್ಯವು ಎಂದೋ
ತಾನೆಯೆ ಹೊಸನಾಡಿನ ದೊರೆಯೆಂದೋ

ತಲೆಯಲಿ ಕೊಡೆಯಿರಿಸಿ
ನಲಿವುದು ಹಗಲಿರುಳು
ಹೊಸಕಾಲದ ನವಿಲು !

ಮುಗಿಲದು ನಸುವೆಯೆ ತನ್ನಯ ಮುಸುಕನು
ತೆಗೆದೊಗೆದೊಳ್ಳಿಯ ನೇಸರ ನಗೆಯಲಿ
ಝುಗಝುಗವಿರುತಿರೆ ಬಿಂಕದ ಗರುವಿನ
ಬಗೆಬಗೆ ಬಣ್ಣದ ಗರಿಯನೆ ತೆರೆಯುತ

ಮೆಲ್ಲನೆ ಒಗೆಯುವನು
ಕಾಲದಿ ಕಾಲ್ಗಳನು
ಹೊಸಕಾಲದ ಸಖನು !

ಗರಿಯಲಿ ಬಗೆಬಗೆ ಬಯಕೆಯ ಹರಹುತ
ಗರುವವ ನಡುವಿನ ಪೊಡೆಯಲಿ ತೋರುತ
ಬರುತಿಹ ಬೆಳೆಯನು ಸಿರದಲಿ ಧರಿಸುತ
ಸರುವರ ಕರೆಯುವ ಕೇಕೆಯ ಹಾಕುತ

ಕುಣಿವುದು ಹಗಲಿರುಳು
ಬೆಳೆಗಾಲದ ಕುರುಹು
ಹೊಸಕಾಲದ ನವಿಲು

—ರಂಗನಾಥ

## ಎಳೆಯರಾಗುವಾ !

ಎಳೆಯರಾಗುವಾ ! ನಾವು । ಗೆಳೆಯರಾಗುವಾ !!
ಎಳೆಯತನದ । ಚೆಲುವ ನಗುವ
ಬೆಳಕನಿಳೆಯು । ಒಳಗೆ ಸುರಿವ
ಎಳೆಯರಾಗುವಾ ! ನಾವು ಗೆಳೆಯರಾಗುವಾ !!

ಬೆಳಗು ಬೆಳಕಿನೊಳಗೆ ಬೇಗ
ತಿಳಿದು ನಿದ್ದೆಯಿಂದ ಎದ್ದು
ತೊಳೆದು ಬಗೆಯ ಕಲುಷವನ್ನು
'ಒಳಿತು ಬೆಳೆಯಲೆಂ'ದು ನುಡಿವ
ಎಳೆಯರಾಗುವಾ ! ನಾವು ಗೆಳೆಯರಾಗುವಾ !!

ಬರಿಯ ಬಯಕೆಗಳನು ದೂಡಿ
ಹಿರಿಯ ಎಡರುಗಳನು ಜರೆದು
ಗುರಿಯ ದಾರಿಯನ್ನು ನಡೆದು
ಅರಿವಿನಮೃತವುಂಡು ಬೆಳೆವ
ಎಳೆಯರಾಗುವಾ ! ನಾವು । ಗೆಳೆಯರಾಗುವಾ !!

ಚಿಕ್ಕ ಚಿಕ್ಕ ಗೆಳೆಯರೆಲ್ಲ
ಮಿಕ್ಕಮಾತುಗಳನು ಮರೆದು
ಅಕ್ಕರೆಂಬ ಗುಡಿಯ ಕಟ್ಟಿ
ಐಕ್ಯವೆಂಬ ಶಿಖರವಿಡುವ
ಎಳೆಯರಾಗುವಾ ! ನಾವು । ಗೆಳೆಯರಾಗುವಾ !!

ಒಂದೆ ಮನಸು ಒಂದೆ ಕನಸು
ಒಂದೆ ಭಾವ ಒಂದೆ ಜೀವ
ಒಂದೆ ಹೊರಗು ಒಂದೆ ಒಳಗು
ಇಂದು ಮುಂದು ಎಂದಿಗಿರುವ
ಎಳೆಯರಾಗುವಾ ! ನಾವು । ಗೆಳೆಯರಾಗುವಾ !!

ವಿಷಯವೆಂಬ ಅಹಿಯ ತುಳಿದು
ಅಸುರತನದ ಹೋಳಿಯಾಡಿ
ಕಸದ ಜಗವ ಹೊಸದು ಮಾಡಿ
ಹಸುಳತನದಿ ಹಾಡುತಿರುವ
ಎಳೆಯರಾಗುವಾ ! ನಾವು ಗೆಳೆಯರಾಗುವಾ !!

ಭವದ ಯಾತ್ರೆಯಲ್ಲಿ ಭ್ರಮಿಸಿ
ಬವಣೆಗೊಂಡು ಬಳಲುತಿರುವ
ಭುವನ ಜನಕೆ ದಾರಿದೀಪ
ಧ್ರುವರು ಆಗಿ ಬೆಳಗುತಿರುವ
ಎಳೆಯರಾಗುವಾ ! ನಾವು । ಗೆಳೆಯರಾಗುವಾ !!

ಮುಗಿಲು ಗಂಗೆಯಲ್ಲಿ ಮಿಂದು
ಹಗಲ ಹೂವ ಹರಿದು ತಂದು
ಜಗದ ರಂಗನಡಿಗೆ ನೀಡಿ
ಮುಗಿದು ತೆರೆಯ ಮರೆಗೆ ಸರಿವ
ಎಳೆಯರಾಗುವಾ ! ನಾವು । ಗೆಳೆಯರಾಗುವಾ !!

ನೆಲದ ಹಸುರಿನೊಳಗೆ ಎಸೆದು
ಜಲದ ಕರುಳಿನೊಳಗೆ ಕರಗಿ

ಎಲರ ಕತೆಯನುಸುರಿ ಮುಗಿಲ
ನಳತೆಯರಳಿ ಕಂಪನುಗುವ
ಎಳೆಯರಾಗುವಾ ! ನಾವು ! ಗೆಳೆಯರಾಗುವಾ !!

ನೋವನೆಲ್ಲ ನೊಣೆದು ನುಂಗಿ
ಸಾವು ಎಂಬ ಹಾವು ಹಾಸಿ
ಜೀವಲಕ್ಷ್ಮಿಯೊಡನೆ ಕೂಡಿ
ಭಾವಸಿಂಧುಶಯನರಾಗಿ
ಎಳೆಯರಾಗುವಾ ! ನಾವು ! ಗೆಳೆಯರಾಗುವಾ !!

—ರಾಮದಾಸ

ಜಾನೇವರಿ, ೧೯೩೭

ಮುಗಿಯಿತು.

“ ಸತ್ಯ-ಸೌಂದರ್ಯಗಳೇ ಸಾಹಿತ್ಯದ ಜೀವ-ಕಳೆ ”

# ಕವಿಗಳೂ ಕವಿತೆಗಳೂ

# ಕವಿತೆಗಳ ಮೊದಲ ಸಾಲುಗಳು

# ಜಯಕರ್ನಾಟಕ ಮಂಡಲ

## ಕರ್ನಾಟಕ ಸಂಸ್ಕೃತಿ ಸಂರಕ್ಷಣ ಸಂವರ್ಧನಗಳ

## ಕಾರ್ಯವೇ ಈ ಮಂಡಲದ ಹೆಗ್ಗುರಿಯು

ಕರ್ನಾಟಕದ ಬುದ್ಧಿ, ಕರ್ನಾಟಕದ ಪರಾಕ್ರಮ, ಕರ್ನಾಟಕದ ಸಂಪತ್ತು ಕರ್ನಾಟಕದ ಶಕ್ತಿಗಳು ಕರ್ನಾಟಕದ ಸರ್ವಾಂಗೀಣ ಪ್ರಗತಿಗೆ ಎಲ್ಲ ಬಗೆಯಿಂದಲೂ ಉಪಯೋಗವಾಗುವಂತೆ, ಹಲವು ತೆರನಾಗಿ ಎತ್ತುಗಡೆ ಮಾಡುವದೇ ಮಂಡಲವು ಕೈಕೊಂಡ ಕೆಲಸ. ಕನ್ನಡಿಗರ ಬೆಂಬಲದಿಂದಲೂ ಅನೇಕ ಸಂಸ್ಥೆ, ಸಮಾಜ, ಸಂಘ, ಗುಂಪು, ಕೂಟ, ಮಟ, ತಂಡಗಳ ಸಹಕಾರದಿಂದಲೂ ಕನ್ನಡ ನಾಡಿನ ಸೇವೆಯನ್ನು ಸಾಂಗೋಪಾಂಗವಾಗಿ ಸಾಗಿಸಲು ಮಂಡಲವು ಸಮರ್ಥವಾಗುವದೆಂಬ ನಂಬಿಗೆ. ಮಂಡಲಕ್ಕೆ ಬೇಕಾದುದು ವಿರಾಟವಲ್ಲ, ಒಡನಾಟ, ಪ್ರತಿಸ್ಪರ್ಧೆಯಲ್ಲ, ಸಹಕಾರ.

## ಮಂಡಲಕ್ಕೆ ನೆರವಾಗುವ ಬಗೆಗಳು

೧. ಮಂಡಲವು ನಡೆಸುವ '**ಜಯಕರ್ನಾಟಕ**' ಮಾಸಪತ್ರಿಕೆಗೆ ಐದು ವರೆ ರೂಪಾಯಿ ತುಂಬಿ ಚಂದಾದಾರರಾಗುವದು.

೨. ನೂರು ರೂಪಾಯಿ ಕೊಟ್ಟು, ಪತ್ರಿಕೆಗೆ ಆಜೀವ ಚಂದಾದಾರರಾಗುವದು.

೩. ಮಂಡಲವು ಆಗಾಗ ಪ್ರಕಟಿಸುವ ಗ್ರಂಥಗಳನ್ನು ಕೊಂಡು ಮಂಡಲದ ಮುಂದಿನ ಪ್ರಕಟನಾಕಾರ್ಯಕ್ಕೆ ನೆರವಾಗುವುದು.

೪. ಕನ್ನಡ ನಾಡಿನ ಸೇವೆಗೆ ಟೊಂಕಕಟ್ಟಿ ನಿಂತ ಮಂಡಲಕ್ಕೆ, ತಮ್ಮ ಶಕ್ತಿ ಸಂಪತ್ತುಗಳಿಗೊಪ್ಪುವಂತೆ, ಕಾಣಿಕೆ ಧನಸಹಾಯಗಳನ್ನಿತ್ತು ಪ್ರೋತ್ಸಾಹಿಸುವದು. ಇತ್ಯಾದಿ—ಇತ್ಯಾದಿ.

# ನಮ್ಮಲ್ಲಿಯ ಪುಸ್ತಕಗಳು

| | | |
|---|---|---|
| ನನ್ನದು ಈ ಕನ್ನಡ ನಾಡು | (ನಾಡಹಾಡುಗಳು) | ೦-೪-೦ |
| ಅರುಣೋದಯ | ,, | ೦-೪-೦ |
| ರಾಷ್ಟ್ರೀಯತ್ವದ ಮೀಮಾಂಸೆ | | ೦-೮-೦ |
| ಉಪನಿಷದ್ರಹಸ್ಯ | | ೩-೦-೦ |
| ಗೀರ್ವಾಣ ಭಾಷಾಪ್ರವೇಶ | | ೦-೧೨-೦ |
| ಅರವಿಂದಘೋಷರ ಚರಿತ್ರೆ | | ೦-೧೨-೦ |
| ವಿಸರ್ಜನ | (ರವೀಂದ್ರರ ನಾಟಕ) | ೦-೮-೦ |
| ಜನಜೀವನ | (ನಾಟಕ) | ೦-೮-೦ |
| ಸಿದ್ಧರಾಮೇಶ್ವರ ವಿಜಯ | (ನಾಟಕ) | ೦-೪-೦ |
| ಪ್ರತಿಭೆ | (ಕಾವ್ಯಚರ್ಚೆ) | ೦-೪-೦ |
| ಕೃಷ್ಣಾಕುಮಾರಿ | (ಚಿಕ್ಕ ಕಾವ್ಯ) | ೦-೩-೦ |
| ನೌಕಾ ಕ್ರೀಡನ | (ಕಾವ್ಯ ಲಹರಿ) | ೦-೧-೦ |
| ಭಾವದೇವಿ | (,,) | ೦-೨-೦ |
| ಸೆಳವು | (,,) | ೦-೨-೦ |
| ಸಂಸಾರವೆಂದರೆ ಸೂಜಿಗಲ್ಲು | (ಕಥೆ) | ೦-೧-೦ |
| ಅನಾಥಬಂಧು | (,,) | ೦-೧-೬ |

ಜಯಕರ್ನಾಟಕ ಕಾರ್ಯಾಲಯ,
ಸಾಧನಕೇರಿ; ಧಾರವಾಡ.

ಮುದ್ರಕರು:— ಖಂ. ರಾ. ಭಿಸೆ, ಕ. ಪ್ರಿಂ. ವರ್ಕ್ಸ್, ಧಾರವಾಡ;
ಪ್ರಕಾಶಕರು:— ಶೇ. ಗೋ. ಕುಲಕರ್ಣಿ, ಜಯಕರ್ನಾಟಕ ಕಾರ್ಯಾಲಯ,
ಸಾಧನಕೇರಿ. ಧಾರವಾಡ, [illegible], ೧೯೩೦.